KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೫, ೨೦೦೯ (ಆಶ್ವಯುಜ ೨೩, ಶಕ ವರ್ಷ ೧೯೩೧) | ಸಂಚಿಕೆ ೪೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಪರಮೇಶ್ವರ ಎಸ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸಾಗರ, ಶಿವಮೊಗ್ಗ ಜಿಲ್ಲೆ, ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಒ (1) 103/2007–08, ದಿನಾಂಕ: 19.05.2008

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಪರಮೇಶ್ವರ ಎಸ್, ಇವರು ದಿನಾಂಕ: 13.07.2004 ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು, ವೈಯಕ್ತಿಕ ಹಾಗೂ ಕೌಟುಂಬಿಕ ಕಾರಣಗಳಿಂದ ದಿನಾಂಕ: 25.06.2007 ರಂದು ಹುದ್ದೆಗೆ ರಾಜೀನಾಮೆ ಸಲ್ಲಿಸಿ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ಇವರ ವಿರುದ್ಧ ಇಲಾಖಾ ವಿಚಾರಣೆ ಇರುವುದಿಲ್ಲ ಹಾಗೂ ಸದರಿ ವೈದ್ಯರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ: 25.06.2007 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 266 ಹೆಚ್.ಎಸ್.ಹೆಚ್ 2009, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ಪರಮೇಶ್ವರ ಎಸ್., ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸಾಗರ, ಶಿವಮೊಗ್ಗ ಜಿಲ್ಲೆ, ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:25.06.2007 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್. 2006

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು, ಇದು ಓವರ್‌ಸೀಸ್ ಇಂಡಿಯನ್ ಫೆಸಿಲಿಟೇಷನ್ ಸೆಂಟರ್, ಗುರುಗಾಂವ್, ಹರಿಯಾಣ, ಇದರ ಸದಸ್ಯತ್ವ ಪಡೆಯುವ ಕುರಿತು.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಓವರ್‌ಸೀಸ್ ಇಂಡಿಯನ್ ಫೆಸಿಲಿಟೇಷನ್ ಸೆಂಟರ್, ಗುರುಗಾಂವ್, ಹರಿಯಾಣ, ಇವರ ಪತ್ರ ದಿನಾಂಕ: 30.03.2009.

2) ಉಪಾಧ್ಯಕ್ಷರು, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇವರ ಕಡತ ಸಂಖ್ಯೆ: ಅಭಾಸಕ/ಉ/ಕ/12/09, ದಿನಾಂಕ: 02.04.2009.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಓವರ್‌ಸೀಸ್ ಇಂಡಿಯನ್ ಫೆಸಿಲಿಟೇಷನ್ ಸೆಂಟರ್, ಗುರುಗಾಂವ್, ಹರಿಯಾಣ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಪತ್ರದಲ್ಲಿ ಸದರಿ ಸಂಸ್ಥೆಯು ಅನಿವಾಸಿ ಭಾರತೀಯರ ಆರ್ಥಿಕ ಮತ್ತು ಬೌದ್ಧಿಕ ಚಟುವಟಿಕೆಗಳನ್ನು ಭಾರತದಲ್ಲಿ ವಿಸ್ತರಿಸುವ ದೃಷ್ಟಿಯಿಂದ ಸ್ಥಾಪನೆಗೊಂಡಿದ್ದು, ಅನಿವಾಸಿ ಭಾರತೀಯರು ಭಾರತದಲ್ಲಿನ ಉದ್ಯಮಗಳಲ್ಲಿ ಬಂಡವಾಳ ಹೂಡಲು ಉತ್ತೇಜಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿರುವುದಾಗಿಯೂ, ಹಾಗೂ ಈ ಸಂಸ್ಥೆಯು Ministry of Overseas Indian Affairs and Confederation of Indian Industry ಹೊಂದಿರುವ ಉದ್ದೇಶಗಳನ್ನು ಹೊಂದಿರುವುದಾಗಿ ತಿಳಿಸುತ್ತಾ ಮುಂದುವರೆದು ಸದರಿ ಸಂಸ್ಥೆಯು ಅನಿವಾಸಿ ಭಾರತೀಯರಿಗೆ ಅವಶ್ಯವಿರುವ ಸೌಲಭ್ಯಗಳನ್ನು ಕಲ್ಪಿಸುವ ದೃಷ್ಟಿಯಿಂದ ಕರ್ನಾಟಕ ರಾಜ್ಯದೊಂದಿಗೆ ಸಂಪರ್ಕ ಹೊಂದಲು ಇಚ್ಚಿಸಿ ಸದಸ್ಯತ್ವವನ್ನು ಪಡೆಯಲು ಆಹ್ವಾನಿಸಿರುತ್ತದೆ.

ಉಪಾಧ್ಯಕ್ಷರು, ಅನಿವಾಸಿ ಭಾರತೀಯರ ಸಮಿತಿ, ಕರ್ನಾಟಕ, ಬೆಂಗಳೂರು, ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಪತ್ರದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದು ಮೇಲ್ಕಂಡ ಸಂಸ್ಥೆಯ ಸದಸ್ಯತ್ವ ಪಡೆಯುವುದರಿಂದ ಸಮಿತಿಯ ಕಾರ್ಯ ಚಟುವಟಿಕೆಗಳಿಗೆ ಅನುಕೂಲವಾಗುವುದರಿಂದ ರೂ. 10.00 ಲಕ್ಷಗಳನ್ನು ಪಾವತಿಸಿ ಸದಸ್ಯತ್ವವನ್ನು ಪಡೆಯಲು ರೂ. 10.00 ಲಕ್ಷಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಗಣಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86, ಶಿಸನೇ 2009, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಸಂಸ್ಥೆಯು ಓವರ್‌ಸೀಸ್ ಇಂಡಿಯನ್ ಫೆಸಿಲಿಟೇಷನ್ ಸೆಂಟರ್, ಗುರುಗಾಂವ್, ಹರಿಯಾಣ ಇದರ ಸದಸ್ಯತ್ವವನ್ನು ಪಡೆಯಲು ಅನುವಾಗುವಂತೆ ರೂ. 10.00 ಲಕ್ಷಗಳನ್ನು ಮಂಜೂರು ಮಾಡಲಾಗಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2205–00–800–0–09–059 (ಇತರೆ ಖರ್ಚು) (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು.

3. ಸರ್ಕಾರದ ಅಧೀನ ಕಾರ್ಯದರ್ಶಿಯವರು, ಸಿ,.ಆ.ಸು. ಇಲಾಖೆ (ಲೆಕ್ಕಪತ್ರ –2) ಇವರು ಮೇಲ್ಕಂಡ ಹಣವನ್ನು ಖಜಾನೆಯಿಂದ ಪಡೆದು ಸಂಬಂಧಿಸಿದ ಸಂಸ್ಥೆಗೆ ಪಾವತಿಸತಕ್ಕದ್ದು.

4. ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಆಇ 705 ವೆಚ್ಚ–1 2009, ದಿನಾಂಕ : 30.05.2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 2013

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದಲ್ಲಿ ನೈಸರ್ಗಿಕ ಅನಿಲ ಹಂಚಿಕೆ ಹಾಗೂ ಸಾಗಾಣಿಕೆಯ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ಉನ್ನತ ಮಟ್ಟದ ಸಮಿತಿಯ ರಚನೆ

**ಓದಲಾಗಿದೆ:** 1. ದಿನಾಂಕ: 10.07.09ರ ಆದೇಶ ಸಂ. ಮೂಅಇ 14 ನಮೋಯು 2008

2. ದಾಬೋಲ್ – ಬೆಂಗಳೂರು (ಬಿಡದಿ) ಅನಿಲ ಕೊಳವೆ ಯೋಜನೆಯನ್ನು ಉತ್ತೇಜಿಸಲು ಹಾಗೂ ಜಾರಿಗೊಳಿಸಲು ಅಪೆಕ್ಸ್ ಹಂತದ ಸಮನ್ವಯ ಸಮಿತಿಯ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿ ನೈಸರ್ಗಿಕ ಅನಿಲ ಯೋಜನೆಯನ್ನು ಜಾರಿಗೊಳಿಸಲು ರಾಜ್ಯ ಸರ್ಕಾರ ಹಾಗೂ ಭಾರತ ಅನಿಲ ಪ್ರಾಧಿಕಾರ (GAIL) ನಡುವೆ ಆದ ಒಪ್ಪಂದದಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಹಾಗೂ ನಿರ್ದೇಶಕರು (ಮಾರುಕಟ್ಟೆ) GAIL ಇವರು ದಿನಾಂಕ 29.04.2009 ರಂದು ಒಪ್ಪಂದ ಪತ್ರಕ್ಕೆ ಸಹಿ ಮಾಡಿರುತ್ತಾರೆ. ರಾಜ್ಯವು ಇಂಧನ ಕೊರತೆಯನ್ನು ಎದುರಿಸುತ್ತಿದೆ. ರಾಜ್ಯ ಸರ್ಕಾರಿ ಸ್ವಾಮ್ಯದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (KPCL) ಹಾಗೂ ಕರ್ನಾಟಕ ವಿದ್ಯುತ್ ಕಂಪನಿ ನಿಯಮಿತ (PCKL) ಗಳು ರಾಜ್ಯದ ವಿವಿಧ ಸ್ಥಳಗಳಲ್ಲಿ ವಿದ್ಯುತ್ ಯೋಜನೆಯನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಹೊಂದಿರುತ್ತದೆ. ರಾಜ್ಯದಲ್ಲಿ ವಿದ್ಯುತ್ ಸ್ಥಾವರಗಳನ್ನು ಸ್ಥಾಪಿಸುವ ಸ್ವತಂತ್ರ ವಿದ್ಯುತ್ ಉತ್ಪಾದಕರಿಗೂ ರಾಜ್ಯ ಸರ್ಕಾರವು ಪ್ರೋತ್ಸಾಹಿಸುತ್ತಿದೆ.

2. ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ಯಮಗಳಲ್ಲಿ ನವರತ್ನಗಳಲ್ಲಿ ಒಂದಾದ ಭಾರತ ಅನಿಲ ಸಂಸ್ಥೆಯ ಪ್ರಾಧಿಕಾರವು (GAIL) ದಾಬೋಲ್ – ಬೆಂಗಳೂರು ಅನಿಲ ಕೊಳವೆ ಮಾರ್ಗವನ್ನು ಸ್ಥಾಪಿಸುತ್ತಿದ್ದು, ಈ ಯೋಜನೆಗೆ ಅಗತ್ಯವಾದ ಬೆಂಬಲ

ಕ್ರಮಗಳನ್ನು ಒದಗಿಸುವಂತೆ ರಾಜ್ಯ ಸರ್ಕಾರವನ್ನು ಕೋರಿದೆ. ಈ ಯೋಜನೆಯು ಕಾರ್ಯಗತಗೊಂಡಾಗ ಕೈಗಾರಿಕೆ ಹಾಗೂ ವಿದ್ಯುತ್ ಯೋಜನೆಗಳಿಗೆ ಅನೇಕ ಅವಕಾಶವನ್ನು ಒದಗಿಸುವುದು ಹಾಗೂ ಆ ಸಂಸ್ಥೆಗಳ ಇಂಧನ ಅಗತ್ಯತೆಯನ್ನು ನೈಸರ್ಗಿಕ ಅನಿಲ ಮುಖಾಂತರ ಭರಿಸಲು ಸಹಾಯಕವಾಗುವುದು. ದಿನಾಂಕ : 20.11.2012ರ ವೇಳೆಗೆ ದ್ರವ ರೂಪದ ನೈಸರ್ಗಿಕ ಅನಿಲ ಬೇಡಿಕೆಯು (LNG) ಸುಮಾರು 45 MMSCMD ರಷ್ಟಾಗಬಹುದೆಂದು ಅಂದಾಜಿಸಲಾಗಿದೆ.

3. ರಾಜ್ಯದ ಆರ್ಥಿಕ ಸಂವೃದ್ಧಿಗೆ ಅನಿಲ ಗ್ರಿಡ್‌ನ ಪ್ರಾಮುಖ್ಯತೆಯನ್ನು ಮನಗಂಡು ರಾಜ್ಯ ಸರ್ಕಾರ ಹಾಗೂ ಭಾರತ ಅನಿಲ ಪ್ರಾಧಿಕಾರ (GAIL) ನಡುವಿನ ಸಹಕಾರಕ್ಕೆ ಅಗತ್ಯ ಚೌಕಟನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ವಿಧಿಸಿ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮನ್ವಯ ಸಮೂಹವನ್ನು ರಚಿಸಲಾಗಿದೆ. ಈ ಸಮಿತಿಯು 15 ದಿನಗಳಿಗೆ ಒಂದು ಸಲ ನಿಯಮಿತವಾಗಿ ಸಭೆ ಸೇರುವುದು. ಈ ಯೋಜನೆಗೆ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಾದ ಕಂದಾಯ, ಲೋಕೋಪಯೋಗಿ, ಸಾರಿಗೆ, ವಾಣಿಜ್ಯ ಮತ್ತು ಕೈಗಾರಿಕೆ, ಇಂಧನ ನಗರಾಭಿವೃದ್ಧಿ ಹಾಗೂ ಪರಿಸರ ಇಲಾಖೆಗಳ ಸಮನ್ವಯ ಅಗತ್ಯವಾಗಿದ್ದು ಈ ವಿಷಯಗಳನ್ನು ಮುಖ್ಯ ಕಾರ್ಯದರ್ಶಿ/ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸಂಬಂಧಿತ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳು ಸದಸ್ಯರಾಗಿರುವ ಸಮಿತಿಯಲ್ಲಿ ನಿರ್ಣಯಿಸಬಹುದಾಗಿದೆ.

4. ಅಂತೆಯೇ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 14 ನಮೋಯು 2008, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2009**

ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮನ್ವಯ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲಾಗಿದೆ.

1. ಸರ್ಕಾರದ ಮುಖ್ಯ ಕಾರ್ಯದರ್ಶಿ
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ – ಸದಸ್ಯ ಕಾರ್ಯದರ್ಶಿ
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ
5. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ,
6. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
7. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ ಇಲಾಖೆ
8. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ
9. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ,

ಉಲ್ಲೇಖದ ಷರತ್ತು/ನಿಬಂಧನೆಗಳು (Terms of Reference)

1. ಯೋಜನೆಯ ಕಾರ್ಯಸೂಚಿ ಹಾಗೂ ಸಾಧಿಸಬೇಕಾದ ಮೈಲಿಗಲ್ಲುಗಳನ್ನು ಈ ಸಮಿತಿಯು ಪರಿಶೀಲಿಸುವುದು.
2. ಸಮನ್ವಯ ವಿಷಯಗಳನ್ನು ಈ ಸಮಿತಿಯು ಬಗೆಹರಿಸುವುದು.
3. ಕನಿಷ್ಟ ಎರಡು ತಿಂಗಳಿಗೊಂದು ಬಾರಿ ಈ ಸಮಿತಿ ಸಭೆ ಸೇರುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2014

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಭೂತ ಅಭಿವೃದ್ಧಿ ಇಲಾಖೆ.

## ಕೃಷಿ ಸಚಿವಾಲಯ

**ವಿಷಯ:** ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಕೃಷಿ ನಿರ್ದೇಶಕರು, (ಓ.ಪಿ.ಜಿ.) ಇವರಿಗೆ ಹಳಿಯಾಳ, ಉತ್ತರ ಕನ್ನಡ ಜಿಲ್ಲೆ, ಕಾರವಾರ, ಇವರು ಸ್ವ ಇಚ್ಚಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ:** 1) ಕೃಷಿ ಆಯುಕ್ತರ ಪತ್ರ ಸಂ. ಕೃಷಿಪ–1/01/2009–10, ದಿನಾಂಕ : 22.06.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಕೃಷಿ ನಿರ್ದೇಶಕರು, (ಓ.ಪಿ.ಜಿ.) ಹಳಿಯಾಳ, ಇವರು ಕೌಟುಂಬಿಕ ಕಾರಣಗಳಿಂದಾಗಿ ದಿನಾಂಕ: 31.05.2009 ರಿಂದ ಅಥವಾ 30.06.2009 ರಿಂದ ಜಾರಿಗೆ ಬರುವಂತೆ ಸ್ವ ಇಚ್ಚಾ ನಿವೃತ್ತಿ ಕೋರಿ ಸಲ್ಲಿಸಿರುವ ದಿನಾಂಕ: 20.02.2009 ಹಾಗೂ 15.05.2009ರ ಮನವಿಯೊಂದಿಗೆ ಹಾಗೂ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣ ಷರತ್ತುಗಳಿಗೊಳಪಟ್ಟು ಸ್ವ–ಇಚ್ಚಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕೃತೋಇ 173 ಕೃಪಸೇ 2009, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಕೃಷಿ ನಿರ್ದೇಶಕರು, (ಒ.ಪಿ.ಜಿ.), ಹಳಿಯಾಳ, ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ 31.08.2009 ರಿಂದ ಜಾರಿಗೆ ಬರುವಂತೆ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 285 (1) (ಎ)ರ ಅನ್ವಯ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2015

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ, ಬೀಳಗಿ ತಾಲ್ಲೂಕು, ಕಾತರಕಿ–ಕಲಾದಗಿ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 51 ಅಪಿಬಂ 2009, ದಿನಾಂಕ 17/01/09.
2. ದಿನಾಂಕ 17/07/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವಲಯ/ಬಿಜೆಪಿ/ ಎಇ–6/2009–10/4230.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 16/07/09ರ ಪತ್ರ ಸಂಖ್ಯೆ:ಮುಸದ/ ಆಪ್ತಶಾಖೆ/ಟೆಂಡರ್/08–09/ 1726.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಬೀಳಗಿ ತಾಲ್ಲೂಕು, ಕಾತರಕಿ–ಕಲಾದಗಿ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ 1092.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 17/01/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿ:31/01/09 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:04/02/09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿ:13/02/09 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 15/06/09ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 26/06/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.10,29,56,887/– |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ.9,90,63,615/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್.ವಿ.ಬಂಡಿ,<br>1ನೇ ದರ್ಜೆ ಗುತ್ತಿಗೆದಾರರು | ರೂ.12,97,52,736/– | 26.03 ಹೆಚ್ಚು | 30.97ಹೆಚ್ಚು |
| 2. | ಜಿ.ಶಂಕರ್, 1ನೇ ದರ್ಜೆ ಗುತ್ತಿಗೆದಾರರು. | ರೂ.13,40,02,357/– | 30.15 ಹೆಚ್ಚು | 35.26 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.12,97,52,736–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.97ರಷ್ಟು ಹೆಚ್ಚಾಗಿದೆ. ಈ ಕಾಮಗಾರಿಯನ್ನು ತಕ್ಷಣವೇ ಕೈಗೊಳ್ಳುವ ಅಗತ್ಯವಿದ್ದುದರಿಂದ, ದಿನಾಂಕ 15/07/09ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಸಮಿತಿಯ ಅಧ್ಯಕ್ಷರ ಅನುಮತಿಯೊಂದಿಗೆ ಟೆಂಡರ್‌ನ್ನು ಪರಿಶೀಲಿಸ ಲಾಗಿದ್ದು, ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.9,90,63,615–00ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.11,38,24,093–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಮಿತಿಯು ತೀರ್ಮಾನಿಸಿರುವುದಾಗಿ ತಿಳಿಸಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ದಿನಾಂಕ 15/07/09ರ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ನಡವಳಿಗಳನ್ನು ಮೇಲೆ 3ರಲ್ಲಿ ಓದಲಾದ ಪತ್ರದೊಂದಿಗೆ ಸ್ವೀಕರಿಸಲಾಗಿದ್ದು, ನಡವಳಿಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 51 ಅಪಿಬಂ 2009, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಬೀಳಗಿ ತಾಲ್ಲೂಕು, ಕಾತರಕಿ–ಕಲಾದಗಿ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.9,90,63,615–00ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.11,38,24,093–00ಗಳಿಗೆ(ಹನ್ನೊಂದು ಕೋಟಿ ಮೂವತ್ತೆಂಟು ಲಕ್ಷದ ಇಪ್ಪತ್ತಾ್ನಲ್ಕು ಸಾವಿರದ ತೊಂಭತ್ತ್ಮೂರು ರೂ.ಗಳು ಮಾತ್ರ) ಶ್ರೀ ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2043

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕು ಕೊಡ್ಲಿವಾಡ ಮತ್ತು ಸತ್ತಿಗೇರಿ ಗ್ರಾಮಗಳ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 10/07/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)/ಬಿಜಾ/ಭೂಸ್ವಾಪ್ರ/ 2009–10/4065.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕು ಕೊಡ್ಲಿವಾಡ ಮತ್ತು ಸತ್ತಿಗೇರಿ ಗ್ರಾಮಗಳ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸತ್ತಿಗೇರಿ ಗ್ರಾಮದ ಜಮೀನುಗಳಿಗೆ ಸವದತ್ತಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.17,34,925–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 18/11/2004
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 25/05/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸವದತ್ತಿ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 217 ಎಲ್‌ಸಿಬಿ 2008, ದಿನಾಂಕ 08/12/08ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್‌ಎಸಿ ಸಂಖ್ಯೆ | ಸತ್ತಿಗೇರಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 28/07 | 750/1 | 1–11 | 490761 |
| 2 | 25/07 | 750/1 | 1–18 | 558093 |
| 3 | 26/07 | 750/2 | 0–20 | 199923 |
| 4 | 27/07 | 753 | 0–25 | 207002 |
| 5 | 29/07 | 751 | 0–29 | 279147 |
| | **ಒಟ್ಟು** | | | **1734926** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 111 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2009**

ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕು ಕೊಡ್ಲಿವಾಡ ಮತ್ತು ಸತ್ತಿಗೇರಿ ಗ್ರಾಮಗಳ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸತ್ತಿಗೇರಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.17,34,925–00ಗಳನ್ನು (ಹದಿನೇಳು ಲಕ್ಷದ ಮೂವತ್ತಾಲ್ಕು ಸಾವಿರದ ಒಂಭೈನೂರ ಇಪ್ಪತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2045

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 25/07/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009–10/4439.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಾಬಾದ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.19,13,475–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 22/06/2006
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12/02/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಅಥಣಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 738 ಎಲ್‌ಸಿಬಿ 2009, ದಿನಾಂಕ 04/03/09ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮಲಾಬಾದ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 105/07 | 78/1 | 0–33 | 145086 |
| 2 | 106/97 | 78/2 | 0–33 | 221270 |
| 3 | 107/07 | 78/3 | 0–39 | 261500 |
| 4 | 108/07 | 78/4 | 1–01 | 274910 |
| 5 | 109/07 | 78/5 | 0–32 | 214564 |
| 6 | 110/07 | 78/6 | 0–29 | 194449 |
| 7 | 111/07 | 78/7 | 0–24 | 105517 |
| 8 | 112/07 | 78/8 | 0–26 | 174333 |
| 9 | 113/07 | 78/9 | 0–24 | 160923 |
| 10 | 114/07 | 78/10 | 0–24 | 160923 |
| | ಒಟ್ಟು | | | **1913475** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 124 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಬಾದ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.19,13,475–00ಗಳನ್ನು (ಹತ್ತೊಂಭತ್ತು ಲಕ್ಷದ ಹದಿಮೂರು ಸಾವಿರದ ನಾನೂರ ಎಪ್ಪತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2047

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 22/12/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/6747.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು ಕಳಸದಾಳ–1 ಸಣ್ಣ ನೀರಾವರಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದೋಣಗಾಪೂರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.33,30,551–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 18/08/1994
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 09/11/1998

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬೀದರ್‌ನ ಹೆಚ್ಚುವರಿ ಸಿವಿಲ್(ಹಿರಿಯ ಶ್ರೇಣಿ)ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಕಂದಾಯ ಇಲಾಖೆಯು ಟಿಪ್ಪಣಿ ಸಂಖ್ಯೆ:ಕಂಇ 15 ಭೂಸ್ವಾಬೀ 09, ದಿನಾಂಕ 11/05/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂ. | ದೋಣಗಾಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 63/01 | 241/1 | 15–10 | 33,30,551–00 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 08 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2009**

ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು, ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ದೋಣಗಾಪುರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.33,30,551–00ಗಳನ್ನು (ಮೂವತ್ತ್ಮೂರು ಲಕ್ಷದ ಮೂವತ್ತು ಸಾವಿರದ ಐನೂರ ಐವತ್ತೊಂದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2048

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಖಾಜಿಕೋಟನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 22/12/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/6746.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 22/12/08ರ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಖಾಜಿಕೋಟನೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಖಾಜಿಕೋಟನೂರ ಗ್ರಾಮದ ಜಮೀನುಗಳಿಗೆ ಎಂ.ಎಫ್.ಎ ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.19,25,834–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 18/10/1990.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 27/10/1992.

ಐತೀರ್ಪಿನಂತೆ ಪರಿಹಾರ ಧನ ಪಡೆದ ಖಾಜಿಖೋಟನೂರ ಗ್ರಾಮದ ಸ.ನಂ.10/2ರ ಜಮೀನುಗಳ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ. 585/94ರಲ್ಲಿ ಮಾನ್ಯ ನ್ಯಾಯಾಲಯವು ಭೂಸ್ವಾಧೀನಾಧಿಕಾರಿಗಳು ಐತೀರ್ಪಿನಲ್ಲಿ ಪ್ರತಿ ಎಕರೆಗೆ ನಿಗದಿಪಡಿಸಿದ್ದ ಭೂಮೌಲ್ಯ ರೂ.10,000/– ಗಳಿಂದ 30,000/–ಗಳಿಗೆ ಹೆಚ್ಚಿಸಿ ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಂಎಫ್‌ಎ 634/98 ವಜಾಗೊಂಡಿದೆ. ಉಚ್ಚ ನ್ಯಾಯಾಲಯದ ತೀರ್ಪಿನ ಮೇಲೆ ಸರ್ಕಾರವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಸ್.ಎಲ್.ಪಿ.ಸಂಖ್ಯೆ:8378/01, ದಿನಾಂಕ 23/11/01ರಂದು ವಜಾಗೊಂಡಿದೆ.

ಪ್ರಕರಣಕ್ಕೆ ಪಾವತಿಸಬೇಕಾದ ಹೆಚ್ಚಿನ ಪರಿಹಾರ ಧನದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂ. | ಎಂಎಫ್‌ಎ ಸಂಖ್ಯೆ | ಖಾಜಿಖೋಟನೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 585/94 | 634/98 | 10/2 | 21–00 | 19,25,834–00 |

*** ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 64 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 21ನೇ ಆಗಸ್ಟ್ 2009**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಖಾಜಿಕೋಟನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಖಾಜಿಖೋಟನೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.19,25,834–00 ಗಳನ್ನು (ಹತ್ತೊಂಭತ್ತು ಲಕ್ಷದ ಇಪ್ಪತ್ತೈದು ಸಾವಿರದ ಎಂಟು ನೂರ ಮೂವತ್ತಾನ್ಲುಕ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2049 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 25/07/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009–10/4438.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಾಬಾದ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 22/06/2006
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12/02/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಅಥಣಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 712 ಎಲ್‌ಸಿಬಿ 2009, ದಿನಾಂಕ 24/02/09ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮಲಾಬಾದ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 125/07 | 94/4 | 2–20 | 540624 |
| 2 | 126/07 | 95/2 | 1–24 | 345999 |
| 3 | 127/07 | 95/3 | 1–03 | 288867 |
| 4 | 128/07 | 96/3 | 0–08 | 53743 |
| 5 | 129/07 | 96/4 | 0–16 | 86500 |
| 6 | 130/07 | 96/5 | 0–01 | 6718 |
| 7 | 131/07 | 97/1 | 0–07 | 37844 |
| 8 | 132/07 | 97/2ಅ | 0–04 | 21625 |
| 9 | 133/07 | 97/2ಬ | 0–02 | 8810 |

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮಲಾಬಾದ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 10 | 134/07 | 71 | 0–10 | 44049 |
| 11 | 135/07 | 72/1 | 0–03 | 13215 |
| | ಒಟ್ಟು | | | **1447994** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 120 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಬಾದ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.14,47,994–00ಗಳನ್ನು (ಹದಿನಾಲ್ಕು ಲಕ್ಷದ ನಲವತ್ತೇಳು ಸಾವಿರದ ಒಂಭೈನೂರ ತೊಂಭತ್ತ್ನಾಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2050 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 25/07/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009–10/4440.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಾಬಾದ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 22/06/2006
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12/02/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಅಥಣಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 711 ಎಲ್‌ಸಿಬಿ 2009, ದಿನಾಂಕ 24/02/09ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮಲಾಬಾದ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 136/07 | 72/2 | 0–02 | 13409 |
| 2 | 137/07 | 72/3 | 0–04 | 21583 |
| | | 72/4 | 0–04 | 17586 |
| 3 | 138/07 | 72/5 | 0–04 | 21583 |
| | | 76/3 | 1–22 | 272587 |
| 4 | 139/07 | 75/1 | 0–32 | 140691 |
| 5 | 140/07 | 75/2 | 0–10 | 67051 |
| 6 | 141/07 | 75/3 | 0–10 | 67051 |
| 7 | 142/07 | 75/4 | 0–03 | 20114 |
| 8 | 143/07 | 76/1 | 3–24 | 965540 |
| | | 77 | 3–05 | 838142 |
| 9 | 144/07 | 76/2 | 3–20 | 938719 |
| 10 | 145/07 | 79 | 1–33 | 393908 |
| 11 | 8/08 | 96/2 | 1–00 | 215841 |
| | **ಒಟ್ಟು** | | | **3993805** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 122ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಬಾದ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.39,93,805–00ಗಳನ್ನು(ಮೂವತ್ತೊಂಭತ್ತು ಲಕ್ಷದ ತೊಂಭತ್ತ್ಮೂರು ಸಾವಿರದ ಎಂಟುನೂರ ಐದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2054

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಶೇಷಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 30/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009–10/3132.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 30/05/09ರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಶೇಷಿ ಗ್ರಾಮದ ಜಮೀನುಗಳಿಗೆ ಕೊಪ್ಪಳದ ಉಪ ವಿಭಾಗಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಪ್ರಕಾರ ಉಪ ವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ಕೊಪ್ಪಳ ಇವರ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ.25,68,958–00ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಕೆರೆಯ ಮೂಲ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 17/09/1996
- ಉಪ ವಿಭಾಗಾಧಿಕಾರಿಗಳ ಐತೀರ್ಪಿನ ದಿನಾಂಕ 30/09/1998

ಭೂಸ್ವಾಧೀನಾದಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ನಿಡಶೇಷಿ ಗ್ರಾಮದ ಸ.ನಂ.ಗಳ ಜಮೀನಿನ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:438/2000ನ್ನು ದಾಖಲಿಸಿ ಹೆಚ್ಚಿನ ಪರಿಹಾರ ಧನಕ್ಕಾಗಿ ಆದೇಶ ಪಡೆದುಕೊಂಡಿದ್ದಾರೆ. ಈ ಆದೇಶವನ್ನು ಉಲ್ಲೇಖಿಸಿ ಸದರಿ ಭೂಸ್ವಾಧೀನ ಪ್ರಕರಣದಲ್ಲಿ ಸೇರಿದ್ದ ನಿಡಶೇಷಿ ಗ್ರಾಮದ ಕೆಳಕಂಡ ಸರ್ವೆ ನಂಬರ್‌ನ ಜಮೀನಿನ ಭೂಮಾಲೀಕರು ಅವರ ಜಮೀನಿಗೂ ಭೂಸ್ವಾಧೀನ ಕಾಯ್ದೆ 28(ಎ)ರಡಿ ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನಾಧಿಕಾರಿಗಳಿಗೆ ಅರ್ಜಿ ಸಲ್ಲಿಸಿದ್ದರ ಮೇರೆಗೆ ಭೂಸ್ವಾಧೀನಾಧಿಕಾರಿಗಳು ಈ ಬಗ್ಗೆ ಪರಿಶೀಲಿಸಿ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೆಚ್ಚಿನ ಪರಿಹಾರ ಧನಕ್ಕೆ ದಿನಾಂಕ 19/12/08ರಂದು ಐತೀರ್ಪು ನೀಡಿದ್ದಾರೆ. ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪಾವತಿಸಬೇಕಾದ ಪರಿಹಾರ ಧನದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ನಿಡಶೇಷಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಭೂ.ಸ್ವಾ. ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| **1** | **36** | **11–15** | **ಕಂ/ಭೂಸ್ವಾ/4/94–94 28(ಎ) ದಿನಾಂಕ 19/12/08** | **25,68,958–00** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 99 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2009**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಶೇಷಿ ಗ್ರಾಮದ ಮೇಲ್ಕಂಡ ಜಮೀನುಗಳಿಗೆ ಕೊಪ್ಪಳದ ಉಪ ವಿಭಾಗಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಪ್ರಕಾರ ದಿನಾಂಕ 19/12/2008 ರಂದು ನೀಡಿದ ಐತೀರ್ಪಿನಂತೆ ಪರಿಹಾರ ಧನದ ಮೊತ್ತ ರೂ.25,68,958–00ಗಳನ್ನು (ಇಪ್ಪತ್ತೈದು ಲಕ್ಷದ ಅರವತ್ತೆಂಟು ಸಾವಿರದ ಒಂಭೈನೂರ ಐವತ್ತೆಂಟು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ತಿಳಿಸಿರುವ ಸರ್ವೆ ನಂಬರ್‌ನ ಜಮೀನಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2069

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2009–10ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಭಾಗಶಃ ಅನುದಾನವನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–18014:03:2009–10–ಡಿಆರ್‌ಡಿಎ (ಎಸ್‌ಆರ್ ನಂ.10) ದಿನಾಂಕ 13.04.2009, (ಎಸ್‌ಆರ್ ನಂ.32) ದಿನಾಂಕ:19.06.2009.

2. ರಾಜ್ಯ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ: 20.05.2009 ಮತ್ತು 15.07.2009

3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014 : 10 : 2009–10– ಡಿಆರ್‌ಡಿಎ (ಎಸ್‌ಆರ್‌ನಂ.36) ದಿನಾಂಕ: 03.07.2009.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರು ಡಿಆರ್‌ಡಿಎ ಆಡಳಿತ ಯೋಜನೆಗೆ ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಭಾಗಶಃ ಅನುದಾನ ರೂ.4,12,26,000 ಗಳನ್ನು ಚಿಕ್ಕಬಳ್ಳಾಪುರ ಮತ್ತು ರಾಯಚೂರು ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 27 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ರಾಜ್ಯ ಸರ್ಕಾರವು ಉಲ್ಲೇಖಿತ (2)ರ ಆದೇಶಗಳಲ್ಲಿ ಮೊದಲನೇ ಕಂತಿನ ಅನುದಾನ ರೂ.1,37,42,000 ಬಿಡುಗಡೆ ಮಾಡಲಾಗಿತ್ತು. ಕೇಂದ್ರ ಸರ್ಕಾರ ಉಲ್ಲೇಖಿತ (3)ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ರೂ.16,74,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ರೂ. 5,58,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ಮೊದಲನೇ ಕಂತಿನ ಅನುದಾನ ರೂ.5,58,000 ಗಳನ್ನು (ರೂ.ಐದು ಲಕ್ಷದ ಐವತ್ತೆಂಟು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯಿತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಭಾಗಶಃ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ಚಿಕ್ಕಬಳ್ಳಾಪುರ | 453 | 0600ZZ0001 | 16,74,000 | 5,58,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯತಿಗಳ ಅನುದಾನವನ್ನು ಜಿಲ್ಲಾ ಪಂಚಾಯತಿಗಳ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ:"2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ: 26.04.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮ್ಬಿಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತಿ, ಚಿಕ್ಕಬಳ್ಳಾಪುರ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳ, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ 213 ಪಿಬಿಎಸ್.2009 ದಿನಾಂಕ: 01.08.2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 1908

ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2009ನೇ ಜುಲೈ ತಿಂಗಳಲ್ಲಿ ಬಿದ್ದ ಬಾರಿ ಮಳೆಯಿಂದ ಪ್ರವಾಹ ಪರಿಸ್ಥಿತಿ ಉಂಟಾಗಿ ಮಾನವ ಜೀವಹಾನಿ, ಜಾನುವಾರು ಹಾನಿ, ಮನೆಹಾನಿ ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಹಾಗೂ ಕೆಲವೊಂದು ಜಿಲ್ಲೆಗಳಲ್ಲಿ ಮಳೆ ಕೊರತೆಯಿಂದ ಕುಡಿಯುವ ನೀರು ಹಾಗೂ ಮೇವು ಸರಬರಾಜು ಮಾಡುವ ಅವಶ್ಯಕತೆ ಕಂಡು ಬಂದಿದೆ. ಇಂತಹ ಹಾನಿಗೆ ತುರ್ತು ಪರಿಹಾರ ಕೈಗೊಳ್ಳಲು ಹಣ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 137 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿಗೆ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬೆಂಗಳೂರು ಗ್ರಾಮಾಂತರ | 100.00 |
| 2 | ಬಾಗಲಕೋಟೆ | 100.00 |
| 3 | ಬೆಳಗಾಂ | 226.00 |
| 4 | ಬಳ್ಳಾರಿ | 200.00 |
| 5 | ಬಿಜಾಪುರ | 100.00 |
| 6 | ಚಾಮರಾಜನಗರ | 100.00 |
| 7 | ಚಿತ್ರದುರ್ಗ | 100.00 |
| 8 | ದಾವಣಗೆರೆ | 200.00 |
| 9 | ಧಾರವಾಡ | 100.00 |
| 10 | ಗದಗ | 100.00 |
| 11 | ಗುಲ್ಬರ್ಗಾ | 100.00 |
| 12 | ಹಾಸನ | 200.00 |
| 13 | ಹಾವೇರಿ | 200.00 |
| 14 | ಮಂಡ್ಯ | 100.00 |
| 15 | ಮೈಸೂರು | 50.00 |
| 16 | ರಾಯಚೂರು | 100.00 |
| 17 | ತುಮಕೂರು | 100.00 |
| | **ಒಟ್ಟು** | **2176.00** |

(ರೂ. ಎರಡು ಸಾವಿರದ ಒಂದುನೂರ ಎಪ್ಪತ್ತಾರು ಲಕ್ಷಗಳು)

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

a) ಮಾನವ/ಪ್ರಾಣಿ ಜೀವಹಾನಿ

b) ಮನೆ ಹಾನಿ

c) ಬೆಳೆ ಹಾನಿ

d) ಕುಡಿಯುವ ನೀರು ಸರಬರಾಜು

e) ಮೇವು ಸರಬರಾಜು

f) ಹಾನಿಗೊಳಗಾದ ಮೂಲಭೂತ ಸೌಕರ್ಯಗಳ ತುರ್ತು ರಿಪೇರಿ

2) ಕೇಂದ್ರ ಸರ್ಕಾರವು ದಿನಾಂಕ:27.06.2007ರಂದು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–800–1–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 692 ವೆಚ್ಚ–7/2009 ದಿನಾಂಕ:17.07.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1771 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು).

## ಇಂಧನ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಇಎನ್ 354 ಎನ್‌ಸಿಇ 2009, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2009 ದಿನಾಂಕ: 22.8.2009 ರ ಆದೇಶ ಭಾಗದಲ್ಲಿ **"ಬಿಜಾಪುರ ಜಿಲ್ಲೆಯ"** ಎಂಬುದರ ಬದಲಾಗಿ **"ಬಾಗಲಕೋಟೆ ಜಿಲ್ಲೆ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2147 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಸಂವಾಪ್ರ 88 ಕೆಎಂಯು 2009, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ಸರ್ಕಾರದ ಸಮಸಂಖ್ಯೆಯ ದಿನಾಂಕ: 01.08.2009ರ ಆದೇಶದಲ್ಲಿ, ಆದೇಶ ಭಾಗದ ಕ್ರಮ ಸಂಖ್ಯೆ: 2ರ ಕಾಲಂ 3ರಲ್ಲಿ ಹುದ್ದೆ ಸ್ಥಳ ಮತ್ತು ವೇತನ ಶೀರ್ಷಿಕೆಯಡಿಯಲ್ಲಿ **'ಮಾಸಿಕ ವೇತನ ರೂ.8997–00 (ರೂ.ಎಂಟು ಸಾವಿರದ ಒಂಭೈನೂರ ತೊಂಭತ್ತೇಳು ಮಾತ್ರ)'** ಎಂಬುದನ್ನು **ಮಾಸಿಕ ವೇತನ ರೂ.15,000–00 (ರೂ. ಹದಿನೈದು ಸಾವಿರ ಮಾತ್ರ)** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2157 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗದಗ ಜಿಲ್ಲೆ, ಗದಗ ತಾಲ್ಲೂಕಿನ, ಕುರ್ತಕೋಟಿ ಗ್ರಾಮದ ಹತ್ತಿರ ಬಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 ಭಾಗ-1 (1) ದಿನಾಂಕ 28.02.2009

2. ದಿನಾಂಕ 03.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎ.ಇ-3/2009-10/4579.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರುರವರ ದಿನಾಂಕ 05.08.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08-09/1953.

**ಪ್ರಸ್ತಾವನೆ:**

ಗದಗ ಜಿಲ್ಲೆ, ಗದಗ ತಾಲ್ಲೂಕಿನ, ಕುರ್ತಕೋಟಿ ಗ್ರಾಮದ ಹತ್ತಿರ ಬಂದಾರ ನಿರ್ಮಾಣ ಕಾಮಗಾರಿಯ 50.00ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 28.02.2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ದಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬಲೆಟಿನ್ | 03.03.2009 |
| 2 | ಕರ್ನಾಟಕ ರಾಜ್ಯ ಪತ್ರ | 26.02.2009 |
| 3 | ಕನ್ನಡಪ್ರಭ ದಿನ ಪತ್ರಿಕೆಯಲ್ಲಿ | 06.03.2009 |
| 4 | ಪ್ರಜಾವಾಣಿ ದಿನ ಪತ್ರಿಕೆ | 07.03.2009 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 6 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 19.06.2009ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರ್ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 27.07.2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 38,92,282/- |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 39,31,608/- |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ರವಿ ತೋಡುರಕರ, 1ನೇ ದರ್ಜೆ ಗುತ್ತಿಗೆದಾರರು | 45,49,758/- | 16.89 ಹೆಚ್ಚು | 15.72 ಹೆಚ್ಚು |
| 2 | ಎಸ್.ಎ.ಮಾಡಳ್ಳಿ , 1ನೇ ದರ್ಜೆ ಗುತ್ತಿಗೆದಾರರು | 48,21,108/- | 23.86 ಹೆಚ್ಚು | 22.62 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ. ರವಿ ತೋಡುರಕರ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 45,49,758/-ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.72ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 04.08.2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 39,31,608/-ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 44,62,375/-ಗಳಿಗೆ ಕಾಮಗಾರಿಯನ್ನು ಶ್ರೀ. ರವಿ ತೋಡುರಕರ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು

ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 48 ಅಪಿಬಂ 2009, ಬೆಂಗಳೂರು, ದಿನಾಂಕ 12ನೇ ಆಗಸ್ಟ್, 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲೆ, ಗದಗ ತಾಲ್ಲೂಕಿನ, ಕುರ್ತಕೋಟಿ ಗ್ರಾಮದ ಹತ್ತಿರ ಬಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 39,31,608/–ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 44,62,375/–ಗಳಿಗೆ (ನಲವತ್ತಾಲ್ಕು ಲಕ್ಷದ ಅರವತ್ತೆರಡು ಸಾವಿರದ ಮುನ್ನೂರ ಎಪ್ಪತ್ತೈದು ರೂ.ಗಳು ಮಾತ್ರ) ಶ್ರೀ. ರವಿ ತೋಡುರಕರ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2085

**ಕೆ.ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಗದಗ ಜಿಲ್ಲೆ ಹಾಗೂ ತಾಲ್ಲೂಕಿನ, ಹೊಂಬಳ ಹುಯಿಲಗೋಳ ರಸ್ತೆ ಮಧ್ಯದಲ್ಲಿರುವ ಆಳಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 (2) ದಿನಾಂಕ 02.03.2009
2. ದಿನಾಂಕ 03.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎ.ಇ–3/2009–10/4581.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರುರವರ ದಿನಾಂಕ 05.08.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1953.

**ಪ್ರಸ್ತಾವನೆ:**

ಗದಗ ಜಿಲ್ಲೆ ಹಾಗೂ ತಾಲ್ಲೂಕಿನ, ಹೊಂಬಳ ಹುಯಿಲಗೋಳ ರಸ್ತೆ ಮಧ್ಯದಲ್ಲಿರುವ ಆಳಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಕಾಮಗಾರಿಯ 165.00ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 02.03.2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ರಾಜ್ಯ ಟೆಂಡರ್ ಬುಲೆಟಿನ್** | **25.02.2009** |
| **2** | **ಕರ್ನಾಟಕ ರಾಜ್ಯ ಪತ್ರ** | **26.02.2009** |
| **3** | **ಜಿಲ್ಲಾ ಟೆಂಡರ್ ಬುಲೆಟಿನ್** | **03.03.2009** |
| **4** | **ವಿಜಯ ಕರ್ನಾಟಕ** | |
| **5** | **ಕನ್ನಡಪ್ರಭ ದಿನ ಪತ್ರಿಕೆಯಲ್ಲಿ** | **06.03.2009** |
| **6** | **ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನ ಪತ್ರಿಕೆ** | **07.03.2009** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 21.07.2009ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರ್ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು

ದಿನಾಂಕ 27.07.2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 1,48,56,821/– |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 1,48,56,821/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಜಿ.ಎನ್.ಅಗಸನಕೊಪ್ಪ, 1ನೇ ದರ್ಜೆ ಗುತ್ತಿಗೆದಾರರು | 1,75,08,722./– | 17.85 ಹೆಚ್ಚು | 17.85 ಹೆಚ್ಚು |
| 2 | ಅಶೋಕ ಎಸ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು | 1,80,42,074./– | 21.44 ಹೆಚ್ಚು | 21.44 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ. ಜಿ.ಎನ್.ಅಗಸನಕೊಪ್ಪ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 1,75,08,722/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.85ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 04.08.2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,48,56,821/–ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,68,62,491/–ಗಳಿಗೆ ಕಾಮಗಾರಿಯನ್ನು ಶ್ರೀ. ಜಿ.ಎನ್.ಅಗಸನಕೊಪ್ಪ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 46 ಅಪಿಬಂ 2009, ಬೆಂಗಳೂರು, ದಿನಾಂಕ 12ನೇ ಆಗಸ್ಟ್, 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲೆ ಹಾಗೂ ತಾಲ್ಲೂಕಿನ, ಹೊಂಬಳ ಹುಯಿಲಗೋಳ ರಸ್ತೆ ಮಧ್ಯದಲ್ಲಿರುವ ಆಳಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,48,56,821/–ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,68,62,491/–ಗಳಿಗೆ (ಒಂದು ಕೋಟಿ ಅರವತ್ತೆಂಟು ಲಕ್ಷದ ಅರವತ್ತೆರಡು ಸಾವಿರದ ನಾಲ್ಕು ನೂರ ತೊಂಬತ್ತೊಂದು ರೂ.ಗಳು ಮಾತ್ರ) ಶ್ರೀ. ಜಿ.ಎನ್.ಅಗಸನಕೊಪ್ಪ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2086

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಕೌಶಿಕ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007 ದಿನಾಂಕ: 11.12.2007

2. ದಿನಾಂಕ 23/07/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ತಾಂ.2/ಸ.ಇಂ–4/ಹಾಸನ/ಕೌಶಿಕದೊಡ್ಡಕೆರೆ/ಟೆಂಡರ್/2009–10 /2984.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 05.08.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1953.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಕೌಶಿಕ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ 71.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 11.12.2007ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ಹಾಸನ ಜಿಲ್ಲಾ ಟೆಂಡರ್ ಬಲೆಟಿನ್** | **25.10.2008** |
| **2** | **ಕರ್ನಾಟಕ ರಾಜ್ಯ ಪತ್ರ** | **30.10.2008** |
| **3** | **ವಿಜಯ ಕರ್ನಾಟಕ ದಿನ ಪತ್ರಿಕೆ** | **02.11.2008** |
| **4** | **ಕನ್ನಡಪ್ರಭ ದಿನ ಪತ್ರಿಕೆ** | **01.11.2008** |
| **5** | **ದಿ ಟೈಮ್ಸ್ ಅಫ್ ಇಂಡಿಯ ದಿನಪತ್ರಿಕೆ** | **01.11.2008** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 14 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 02.03.2009ರಂದು ತೆರೆಯಲಾಗಿ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 22.05.2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ. 69,56,092/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ. 72,57,160/–** |

| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|---|
| **1** | **ಕೆ.ಎ.ಇಂದ್ರೇಶ್ , 1ನೇ ದರ್ಜೆ ಗುತ್ತಿಗೆದಾರರು** | **83,71,027/–** | **20.34 ಹೆಚ್ಚು** | **15.34 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಕೆ.ಎ.ಇಂದ್ರೇಶ್, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.34ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 04.08.2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 72,57,160–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 82,00,590–00ಗಳಿಗೆ ಕಾಮಗಾರಿಯನ್ನು ಶ್ರೀ ಕೆ.ಎ.ಇಂದ್ರೇಶ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ

ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 58 ಕೆಜಿದು 2009, ಬೆಂಗಳೂರು, ದಿನಾಂಕ 12ನೇ ಆಗಸ್ಟ್, 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಕೌಶಿಕ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.72,57,160–00 ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 82,00,590–00ಗಳಿಗೆ (ಎಂಭತ್ತೆರಡು ಲಕ್ಷದ ಐನೂರ ತೊಂಬತ್ತು ರೂ.ಗಳು ಮಾತ್ರ) ಶ್ರೀ ಕೆ.ಎ.ಇಂದ್ರೇಶ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2087

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಶಾಂತಿಗ್ರಾಮ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007 ದಿನಾಂಕ: 11.12.2007
2. ದಿನಾಂಕ 21/07/09ರ ಮುಖ್ಯ ಇಂಜನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಮುಸದ/ತಾಂ.2/ಸ.ಇಂ–4/ಹಾಸನ/ಶಾಂತಿಗ್ರಾಮ/ ಟೆಂಡರ್/ 2009–10/2961.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 05.08.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1953.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಶಾಂತಿಗ್ರಾಮ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ 89.50 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 11.12.2007ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ಹಾಸನ ಜಿಲ್ಲಾ ಟೆಂಡರ್ ಬಲೆಟಿನ್** | **25.10.2008** |
| **2** | **ಕರ್ನಾಟಕ ರಾಜ್ಯ ಪತ್ರ** | **30.10.2008** |
| **3** | **ವಿಜಯ ಕರ್ನಾಟಕ ದಿನ ಪತ್ರಿಕೆ** | **02.11.2008** |
| **4** | **ಕನ್ನಡಪ್ರಭ ದಿನ ಪತ್ರಿಕೆ** | **01.11.2008** |
| **5** | **ದಿ ಟೈಮ್ಸ್ ಆಫ್ ಇಂಡಿಯ ದಿನಪತ್ರಿಕೆ** | **01.11.2008** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 02.03.2009ರಂದು ತೆರೆಯಲಾಗಿ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 22.05.2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ. 88,83,299/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ. 93,58,295/–** |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| **1** | **ಕೆ.ಎ.ಇಂದ್ರೇಶ್ , 1ನೇ ದರ್ಜೆ ಗುತ್ತಿಗೆದಾರರು** | **1,07,16,399/–** | **20.63 ಹೆಚ್ಚು** | **14.51 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಕೆ.ಎ.ಇಂದ್ರೇಶ್, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. **1,07,16,399/–**ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.51ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 04.08.2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 93,58,295–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,05,74,873–00ಗಳಿಗೆ ಕಾಮಗಾರಿಯನ್ನು ಶ್ರೀ ಕೆ.ಎ.ಇಂದ್ರೇಶ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 59 ಕೆಜಿದು 2009, ಬೆಂಗಳೂರು, ದಿನಾಂಕ 12ನೇ ಆಗಸ್ಟ್, 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಶಾಂತಿಗ್ರಾಮ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 93,58,295–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,05,74,873–00ಗಳಿಗೆ (ಒಂದು ಕೋಟಿ ಐದು ಲಕ್ಷದ ಎಪ್ಪತ್ತಾನಾಲ್ಕು ಸಾವಿರದ ಎಂಟುನೂರ ಎಪ್ಪತ್ತಾಮೂರು ರೂ.ಗಳು ಮಾತ್ರ) ಶ್ರೀ ಕೆ.ಎ.ಇಂದ್ರೇಶ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2088

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ವ್ಯಾಸನಕೆರೆ ಏತ ನೀರಾವರಿ ಯೋಜನೆಗೆ 11ಕೆ.ವಿ ಎಕ್ಸ್‌ಪ್ರೆಸ್ ಫೀಡರ್ ಲೈನ್ ಆಳವಡಿಸುವ (ಬಾಕಿ ಕಾಮಗಾರಿ) ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ: ಸನೀಇ 46 ಏನೀಯೋ 2001 ದಿನಾಂಕ 31.03.2001

2. ದಿನಾಂಕ 24/07/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–12/2009–10/4368.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 05.08.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1953.

**ಪ್ರಸ್ತಾವನೆ:**

ರೂ. 138.00 ಲಕ್ಷ ಅಂದಾಜು ಮೊತ್ತದ ವ್ಯಾಸನಕೆರೆ ಏತ ನೀರಾವರಿ ಯೋಜನೆ ಅಭಿವೃದ್ಧಿ ಕಾಮಗಾರಿಗೆ ಉಲ್ಲೇಖ 1 ರಲ್ಲಿ ಓದಲಾದ ದಿನಾಂಕ 31.03.2001ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಕೆಲಸವನ್ನು ಸಿವಿಲ್, ಮೆಕ್ಯಾನಿಕಲ್ ಹಾಗೂ ಎಲೆಕ್ಟ್ರಿಕಲ್ ಕಾಮಗಾರಿಗಳಾಗಿ ವಿಭಜಿಸಿ ಕೈಗೊಳ್ಳಲಾಗಿದೆ. ಈ ಮೊದಲು ಟೆಂಡರ್ ಮೂಲಕ ವಹಿಸಲಾಗಿದ್ದ ಎಲೆಕ್ಟ್ರಿಕಲ್ ಕಾಮಗಾರಿಯನ್ನು ಮೂಲ ಗುತ್ತಿಗೆದಾರರು ಸ್ಥಗಿತಗೊಳಿಸಿರುವುದರಿಂದ ಮೂಲ ಗುತ್ತಿಗೆಯನ್ನು ಕರಾರಿನಂತೆ ವಜಾಮಾಡಿ ಬಾಕಿ ಕೆಲಸವನ್ನು ಅಂದರೆ 11ಕೆ.ವಿ ಎಕ್ಸ್‌ಪ್ರೆಸ್ ಫೀಡರ್ ಲೈನ್ ಅಳವಡಿಸುವ (ಬಾಕಿ ಕಾಮಗಾರಿ) ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಟೆಂಡರ್ ಕರೆಯಲಾಗಿದ್ದು, ಈ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ಜಿಲ್ಲಾ ಟೆಂಡರ್ ಬಲೆಟಿನ್** | **19.01.2009** |
| **2** | **ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ** | **12.02.2009** |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಟ್ಟು 2 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಪಡೆದು ನಿಗಧಿತ ದಿನಾಂಕದಂದು ಟೆಂಡರ್‌ಗಳನ್ನು ಸಲ್ಲಿಸಿರುವುದಾಗಿ ವರದಿಯಾಗಿದೆ. ಲೋಕ ಸಭಾ ಚುನಾವಣೆ ನೀತಿ ಸಂಹಿತೆಯ ಹಿನ್ನಲೆಯಲ್ಲಿ ನಿಗದಿಪಡಿಸಿದ ದಿನಾಂಕ 06.03.2009ರ ಬದಲಾಗಿ ದಿನಾಂಕ 15.05.2009ರಂದು ತೆರೆದು ಪರಿಶೀಲಿಸಲಾಗಿದೆ. ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ 22,02,776/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ 27,11,905/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಸಿದ್ದಲಿಂಗೇಶ್ವರ ಎಲೆಕ್ಟ್ರಿಕಲ್ಸ್, 2ನೇ ದರ್ಜೆ ಗುತ್ತಿಗೆದಾರರು | 33,66,660/– | 52.83 ಹೆಚ್ಚು | 24.14 ಹೆಚ್ಚು |
| 2 | ಕೆ.ಜಿ.ನಾಗೇಂದ್ರ, 2ನೇ ದರ್ಜೆ ಗುತ್ತಿಗೆದಾರರು | 35,99,245/– | 63.39 ಹೆಚ್ಚು | 32.72 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಸಿದ್ದಲಿಂಗೇಶ್ವರ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 33,66,660/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.14ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 04.08.2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 27,11,905/–ಗಳ ಮೇಲೆ ಶೇ. 14.75 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 31,11,911/–ಗಳಿಗೆ ಕಾಮಗಾರಿಯನ್ನು ಶ್ರೀ ಸಿದ್ದಲಿಂಗೇಶ್ವರ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 28 ಏನೀಯೋ 2009, ಬೆಂಗಳೂರು, ದಿನಾಂಕ 12 ನೇ ಆಗಸ್ಟ್,2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ವ್ಯಾಸನಕೆರೆ ಏತ ನೀರಾವರಿ ಯೋಜನೆಗೆ 11ಕೆ.ವಿ ಎಕ್ಸ್‌ಪ್ರೆಸ್ ಫೀಡರ್ ಲೈನ್ ಅಳವಡಿಸುವ (ಬಾಕಿ ಕಾಮಗಾರಿ) ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 27,11,905/–ಗಳ

ಮೇಲೆ ಶೇ. 14.75 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 31,11,911/–ಗಳಿಗೆ (ಮುವತ್ತೊಂದು ಲಕ್ಷದ ಹನ್ನೊಂದು ಸಾವಿರದ ಒಂಭೈನೂರ ಹನ್ನೊಂದು ರೂ.ಗಳು ಮಾತ್ರ) ಶ್ರೀ ಸಿದ್ದಲಿಂಗೇಶ್ವರ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2089

**ಕೆ.ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಗದಗ ಜಿಲ್ಲೆ, ರೋಣ ತಾಲ್ಲೂಕಿನ, ಡಿ.ಎಸ್. ಹಡಗಲಿ–ಗುಜಮಾಗಡಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009 ದಿನಾಂಕ: 05.02.2009.
2. ದಿನಾಂಕ 03.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–3/2009–10/4578.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 05.08.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1953.

**ಪ್ರಸ್ತಾವನೆ:**

ಗದಗ ಜಿಲ್ಲೆ, ರೋಣ ತಾಲ್ಲೂಕಿನ, ಡಿ.ಎಸ್. ಹಡಗಲಿ–ಗುಜಮಾಗಡಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಕಾಮಗಾರಿಯ 148.00ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 05.02.2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ದಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ರಾಜ್ಯ ಟೆಂಡರ್ ಬಲೆಟಿನ್** | **25.02.2009** |
| 2 | **ಕರ್ನಾಟಕ ರಾಜ್ಯ ಪತ್ರ** | **26.02.2009** |
| 3 | **ಕನ್ನಡಪ್ರಭ ದಿನ ಪತ್ರಿಕೆಯಲ್ಲಿ** | **06.03.2009** |
| 4 | **ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನ ಪತ್ರಿಕೆ** | **07.03.2009** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 7 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 21.07.2009ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರ್ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 27.07.2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | | **ರೂ 1,36,93,974/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | | | | **ರೂ 1,36,93,974/–** |
| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| **1** | **ಜೆ.ಎನ್.ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು** | **1,69,90,841/–** | **24.08 ಹೆಚ್ಚು** | **24.08 ಹೆಚ್ಚು** |

| | | | | |
|---|---|---|---|---|
| 2 | **ಅಶೋಕ ಎಸ್ ಶೆಟ್ಟಿ , 1ನೇ ದರ್ಜೆ ಗುತ್ತಿಗೆದಾರರು** | **1,76,90,955/–** | **29.19 ಹೆಚ್ಚು** | **29.19 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ. ಜೆ.ಎನ್.ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 1,69,90,841/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.08ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 04.08.2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,36,93,974–00ಗಳ ಮೇಲೆ ಶೇಕಡ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,55,42,660–00ಗಳಿಗೆ ಕಾಮಗಾರಿಯನ್ನು ಶ್ರೀ. ಜೆ.ಎನ್.ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 49 ಅಪಿಬಂ 2009, ಬೆಂಗಳೂರು, ದಿನಾಂಕ 12ನೇ ಆಗಸ್ಟ್, 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲೆ, ರೋಣ ತಾಲ್ಲೂಕಿನ, ಡಿ.ಎಸ್. ಹಡಗಲಿ–ಗುಜಮಾಗಡಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,36,93,974–00ಗಳ ಮೇಲೆ ಶೇಕಡ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,55,42,660–00ಗಳಿಗೆ (ಒಂದು ಕೋಟಿ ಐವತ್ತೈದು ಲಕ್ಷದ ನಲವತ್ತೆರಡು ಸಾವಿರದ ಆರುನೂರ ಅರವತ್ತು ರೂ.ಗಳು ಮಾತ್ರ) ಶ್ರೀ. ಜೆ.ಎನ್.ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2090

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ನೂತನವಾಗಿ ರಚಿಸಿರುವ ಜಿಲ್ಲೆಗಳಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಜಿಲ್ಲಾಮಟ್ಟದ ಕಛೇರಿಗಳನ್ನು ತೆರೆಯುವ ಕುರಿತು.

**ಓದಲಾಗಿದೆ :**

1 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ:ಗಭೂಇ/ಸಿಬ್ಬಂದಿ ಅ4/2008–09/141, ದಿನಾಂಕ:8.8.2008.

2. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ:ಗಭೂಇ/ಸಿಬ್ಬಂದಿ ಅ2/08–09/1181, ದಿ:18.7.09.

3. ದಿ:18.08–09ರ ಸರ್ಕಾರಿ ಆದೇಶ ಸಂಖ್ಯೆ:ಸಿಐ 76 ಎಂಜಿಎಸ್ 2008.

4. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ:ಗಭೂಇ/ಸಿಬ್ಬಂದಿ ಅ4/09–10/2724, ದಿ:29.8.09.

**ಪ್ರಸ್ತಾವನೆ:**

ರಾಜ್ಯದಲ್ಲಿ ನೂತನವಾಗಿ ಸ್ಥಾಪಿಸಲ್ಪಟ್ಟ 6 ಜಿಲ್ಲೆಗಳಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗಳನ್ನು ತೆರೆಯುವ ಕುರಿತು ಮೇಲೆ (1) ಮತ್ತು (2)ರಲ್ಲಿ ಕ್ರಮವಾಗಿ ಓದಲಾದ ದಿ:8.8.08 ಮತ್ತು 18.7.09ರ ಪತ್ರಗಳಲ್ಲಿ

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಪ್ರಸ್ತಾವಿಸಿದ್ದರ ಮೇರೆಗೆ, ಮೇಲೆ (3)ರಲ್ಲಿ ಓದಲಾದ ದಿ:18.8.09ರ ಆದೇಶದಲ್ಲಿ ನೂತನವಾಗಿ ಸ್ಥಾಪಿಸಲ್ಪಟ್ಟ ಉಡುಪಿ, ದಾವಣಗೆರೆ ಹಾವೇರಿ ಮತ್ತು ಗದಗ ಜಿಲ್ಲೆಗಳಲ್ಲಿ ತಲಾ 4 ರಂತೆ ಒಟ್ಟು 16 ಹುದ್ದೆಗಳನ್ನು ಆರ್ಥಿಕ ಇಲಾಖೆಯು ಅನುಮೋದಿಸಿರುವಂತೆ ಸೃಷ್ಟಿಸುವುದು. 4 ಜಿಲ್ಲಾ ಮಟ್ಟದ ಕಛೇರಿಗಳಿಗೆ ತಲಾ ಒಂದೊಂದರಂತೆ ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ವಾಹನಚಾಲಕ ಮತ್ತು ಗ್ರೂಪ್–ಡಿ ಹುದ್ದೆಗಳನ್ನು ಸೃಷ್ಟಿಸದೇ ಸೇವೆಯನ್ನು ಮಾತ್ರವೇ ಬಾಹ್ಯಮೂಲಗಳಿಂದ ಪಡೆದುಕೊಳ್ಳುವುದು. ಈ 4 ಕಛೇರಿಗಳಿಗೆ ತಲಾ 1 ಹಿರಿಯ ಭೂವಿಜ್ಞಾನಿ ಹುದ್ದೆಯನ್ನು redeployment ಮೂಲಕ ಭರ್ತಿ ಮಾಡಿ, ಜಿಲ್ಲಾಮಟ್ಟದ 4 ಕಛೇರಿಗಳನ್ನು ಸ್ಥಾಪಿಸಿ ನಿರ್ವಹಿಸಲು ಸರ್ಕಾರವು ಆದೇಶಿಸಿರುತ್ತದೆ.

ಮೇಲೆ (4)ರಲ್ಲಿ ಓದಲಾದ ದಿ:29.8.09ರ ಪತ್ರದಲ್ಲಿ, ಉಡುಪಿ, ದಾವಣಗೆರೆ, ಹಾವೇರಿ ಮತ್ತು ಗದಗ ಜಿಲ್ಲೆಗಳಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಜಿಲ್ಲಾ ಮಟ್ಟದ ಹಿರಿಯ ಭೂವಿಜ್ಞಾನಿ ಕಛೇರಿಗಳನ್ನು ಸ್ಥಾಪಿಸಲು ಸರ್ಕಾರವು ಆದೇಶಿಸಿದ್ದು, ಸದರಿ ಕಛೇರಿಗಳು ಖನಿಜ ಮತ್ತು ಅಂತರ್ಜಲ ವಿಭಾಗದ ಕಾರ್ಯನಿರ್ವಹಿಸಲು ಅನುವಾಗುವಂತೆ ಹಿರಿಯ ಭೂ ವಿಜ್ಞಾನಿ ಹುದ್ದೆಗಳನ್ನು redeployment ಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲಿನಂತೆ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಸಿಐ 76 ಎಂಜಿಎಸ್ 2008, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಉಡುಪಿ, ದಾವಣಗೆರೆ, ಹಾವೇರಿ ಮತ್ತು ಗದಗ ಜಿಲ್ಲೆಗಳಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗಳನ್ನು ಸ್ಥಾಪಿಸಲು ಆದೇಶಿಸಿದ್ದು, ಈ ಕೆಳಕಂಡಂತೆ ಇಲಾಖೆಯ ಹಿರಿಯ ಭೂವಿಜ್ಞಾನಿ ಹುದ್ದೆಗಳನ್ನು ಮರುವಿನ್ಯಾಸಗೊಳಿಸಲು (re-deployment) ಸರ್ಕಾರದವು ಆದೇಶಿಸಿದೆ.

| ಕ್ರ.ಸಂ | ಹುದ್ದೆ ಮತ್ತು ವೇತನ ಶ್ರೇಣಿ | ಪ್ರಸ್ತುತ ಹುದ್ದೆ ಇರುವ ಕಛೇರಿ | ಹುದ್ದೆಯ ಮರುವಿನ್ಯಾಸಗೊಳಿಸಲ್ಪಟ್ಟ ಸ್ಥಳ |
|---|---|---|---|
| 1 | ಹಿರಿಯ ಭೂವಿಜ್ಞಾನಿ 14050–25050 | ನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು | ಹಿರಿಯ ಭೂ ವಿಜ್ಞಾನಿ, ದಾವಣಗೆರೆ |
| 2 | ಹಿರಿಯ ಭೂವಿಜ್ಞಾನಿ 14050–25050 | ನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು | ಹಿರಿಯ ಭೂ ವಿಜ್ಞಾನಿ, ಹಾವೇರಿ |
| 3 | ಹಿರಿಯ ಭೂವಿಜ್ಞಾನಿ 14050–25050 | ಜಂಟಿ ನಿರ್ದೇಶಕರ ಕಛೇರಿ, (ದಕ್ಷಿಣ ವಲಯ), ಗಣಿ ಮತ್ತು ಭೂವಿಜ್ಞಾನ ಇಲಾಖೆ ಮೈಸೂರು | ಹಿರಿಯ ಭೂ ವಿಜ್ಞಾನಿ, ಉಡುಪಿ |
| 4 | ಹಿರಿಯ ಭೂವಿಜ್ಞಾನಿ 14050–25050 | ಜಂಟಿ ನಿರ್ದೇಶಕರ ಕಛೇರಿ, (ಉತ್ತರ ವಲಯ), ಗಣಿ ಮತ್ತು ಭೂವಿಜ್ಞಾನ ಇಲಾಖೆ ಬಳ್ಳಾರಿ | ಹಿರಿಯ ಭೂ ವಿಜ್ಞಾನಿ, ಗದಗ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2078

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## COMMERCE AND INDUSTRIES SECRETARIAT

**Sub:** Permission to M.s. XIndia Steels Limited., to establish a “ 2.5 Million TPA Integrated Steel Plant in Koppal Taluk-Grant of Special Incentives & Concessions Applicable to MEGA Projects & Change the mode of acquisition of partial land by KIADB instead of permission U/s 109 of KLR Act.

**Read:** 1. Proceedings of the 14th State High Level Clearance Committee (SHLCC) meeting held on 17.3.2008.

2. G.O.No. CI 83 SPI 2008 dated: 28.4.2008 .

3. Proceedings of the 17th State High Level Clearance Committee (SHLCC) meeting held on 28.1.2009.

**PREAMBLE:**

M/s XIndia Steels Limited, has proposed to establish a "2.5 MTPA Integrated Steel Plant with 250 MW Captive Power Plant", in 1201 acres 15 guntas of land, at various Sy. Nos in Kunikere & Hirebagnal Villages, Koppal Taluk & District with an investment of Rs., 8735.00 crores was apporoved in the 14th State High Level Clearance Committee (SHLCC) meeting held on 17.3.2008.

The Company has submitted proposal to the Revenue Department to grant permission U/s 109 of KLR Act for purchase of about 185 acres of land, against the total extent of 1201 acres 15 guntas as approved by the SHLCC. The proposal for issue of permission u/s 109 of KLR Act is under consideration of the Revenue Department, The proponents are finding it difficult to purchase the balance 1016 acres of land on their own u/s 109 of KLR Act due to resistance from land owners.

But, subsequently, the committee noted that the extent of land is very large and advised the project proponents to bring the maximum consent from the land owners. The Company shall furnish consent from the land owners for minimum 70% of the land proposed for acquisition to KIADB before KIADB initiates acquisition KIADB will help with compulsory acquisition to achieve contiguity of land.

Hence, the following order.

**Government Order No. CI 58 SPI 2009, Bangalore, Dated:11th August, 2009**

In the circumstances explained above, after detailed discussion the Committee approved the acquisition of 1016 acres of land by KIADB [consent acquisition] instead of permission u/s 109 of KLR Act. The project proponents shall bring owners consents for 70% of the extent of land KIADB will do compulsory acquisition to achieve contiguity.

This approval is valid for a period of two years from the date of issue.

By order and in the name of Governor of Karnataka

P.R. 2079

**APARNA PAVATE**

Desk Officer (Technical Cell)

Commerce and Industries Department

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ:31.3.2009ರೊಳಗೆ ನಡೆಸಬೇಕಾಗಿರುವ ಕರ್ನಾಟಕ ಕ್ಷತ್ರಿಯ ಮರಾಠ ಪರಿಷತ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ನಿಯಮಿತ ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ:ಸಿಒ 47 ಸಿಎಲ್‌ಎಂ 2009, ದಿನಾಂಕ:4.3.2009.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 47 ಸಿಎಲ್‌ಎಂ 2009, ದಿನಾಂಕ:13.5.2009.
3. ಅಧ್ಯಕ್ಷರು, ಕರ್ನಾಟಕ ಕ್ಷತ್ರಿಯ ಮರಾಠ ಪರಿಷತ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ನಿಯಮಿತ ಇವರ ಪತ್ರ ದಿನಾಂಕ:31.7.2009.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಿಒ 47 ಸಿಎಲ್‌ಎಂ 2009, ದಿನಾಂಕ:4.3.2009ರ ಆದೇಶದಲ್ಲಿ ನಿಗಧಿಪಡಿಸಿದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ 2009–10ರಿಂದ ಐದು ವರ್ಷದ ಅವಧಿಗೆ ಆಡಳಿತ ಸಮಿತಿಗೆ ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳಿಗೆ ಚುನಾವಣೆಯನ್ನು ನಡೆಸತಕ್ಕದ್ದೆಂದು ಆದರೆ, ದಿನಾಂಕ:4.3.2009ಕ್ಕೆ ಹಿಂದೆ ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿದ್ದು ಚುನಾವಣೆಯು ಮುಕ್ತಾಯವಾಗದಿದ್ದ ಸಂದರ್ಭಗಳಲ್ಲಿ ಮಾತ್ರ ದಿನಾಂಕ:4.3.2009ರಲ್ಲಿದ್ದಂತೆ ಚುನಾವಣಾ ವೇಳಾ ಪಟ್ಟಿಯ ಯಾವ ಹಂತದಲ್ಲಿ ಚುನಾವಣಾ ಪ್ರಕ್ರಿಯೆಯನ್ನು ನಿಲ್ಲಿಸಲಾಗಿತ್ತೋ ಆ ಹಂತದಿಂದ ಚುನಾವಣಾ ಪ್ರಕ್ರಿಯೆಯ್ನು ಮುಂದುವರಿಸಿ ದಿನಾಂಕ:4.3.2009ರ ಆದೇಶದಲ್ಲಿ ನಿಗಧಿಪಡಿಸಿದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ ಚುನಾವಣೆಯನ್ನು ಮುಕ್ತಾಯಗೊಳಿಸತಕ್ಕದ್ದೆಂದು

ಆದೇಶಿಸಿರುತ್ತದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ಕ್ಷತ್ರಿಯ ಮರಾಠ ಪರಿಷತ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ ಇದರ ಅಧ್ಯಕ್ಷರು ತಮ್ಮ ಪತ್ರದಲ್ಲಿ ಸದರಿ ಸಂಘದ ಆಡಳಿತ ಮಂಡಳಿಗೆ 2009–10ರಿಂದ 2013–14ನೇ ಸಾಲಿಗೆ ನಡೆಸಬೇಕಾದ ಚುನಾವಣೆಯನ್ನು ಇಲಾಖೆ ನಿಗದಿಪಡಿಸಿದ ದಿನಾಂಕದ ಬಗ್ಗೆ ತಿಳುವಳಿಕೆ ಇಲ್ಲದೆ ಅಚಾತುರ್ಯವೆಸಗಿರುವ ಪರಿಣಾಮವಾಗಿ ಕನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ವಿಶೇಷ ಪ್ರಕರಣವೆಂದು ಪರಿಗಣಿಸಿ ಆಡಳಿತ ಮಂಡಳಿಯ ಚುನಾವಣೆಯನ್ನು ದಿನಾಂಕ:13.4.2009ರಂದು ನಡೆಸಲು ಕಾಲಾವಕಾಶವನ್ನು ವಿಸ್ತರಿಸುವಂತೆ ವಿನಂತಿಸಿರುತ್ತಾರೆ.

ಸದರಿ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 138 ಸಿಎಲ್ಎಂ 2009, ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2009**

ಮೇಲಿನ ಪರಿಸ್ಥಿತಿಯಲ್ಲಿ ಕರ್ನಾಟಕ ಕ್ಷತ್ರಿಯ ಮರಾಠ ಪರಿಷತ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ನಿಯಮಿತ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ (4), 28ಎ(5), 28ಬಿ(2) 29ಎಫ್ (4) ಮತ್ತು 39ಎ(2)ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಒ 47 ಸಿಎಲ್ಎಂ 2009, ದಿನಾಂಕ:4.3.2009 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ:30.9.2009ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.9.2009ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2080

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** 2009–10ನೇ ಸಾಲಿನಲ್ಲಿ ಬರಪೀಡಿತವೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಬರ ಪರಿಹಾರ ಕಾರ್ಯಕ್ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ:ಕಂಇ 167 ಟಿಎನ್ಆರ್ 2009, ದಿನಾಂಕ:11.8.2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನಲ್ಲಿ ರಾಜ್ಯದ 20 ಜಿಲ್ಲೆಗಳ 86 ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಲಾಗಿದೆ. ಈ ಬರಪೀಡಿತ ತಾಲ್ಲೂಕುಗಳಲ್ಲಿ ತುರ್ತು ಬರ ಪರಿಹಾರ ಕಾರ್ಯಗಳನ್ನು ಕೈಗೊಳ್ಳುವ ಅವಶ್ಯಕತೆ ಇದ್ದು ಮೊದಲ ಹಂತದಲ್ಲಿ ಗುಲ್ಬರ್ಗಾ ವಿಭಾಗದಡಿಯಲ್ಲಿ ಬರುವ ಬರಪೀಡಿತ 30 ತಾಲ್ಲೂಕುಗಳಿಗೆ ಹಾಗೂ ಬೆಳಗಾಂ ವಿಭಾಗದಡಿಯಲ್ಲಿ ಬರುವ 15 ತಾಲ್ಲೂಕುಗಳಿಗೆ ಪ್ರತಿ ತಾಲ್ಲೂಕಿಗೆ ರೂ. 1 ಕೋಟಿಯಂತೆ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್ಆರ್ 2009, ಬೆಂಗಳೂರು, ದಿನಾಂಕ:27ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ವಿಭಾಗದಲ್ಲಿ ಬರಪೀಡಿತವೆಂದು ಘೋಷಿಸಿರುವ 30 ತಾಲ್ಲೂಕುಗಳಲ್ಲಿ ಹಾಗೂ ಬೆಳಗಾಂ ವಿಭಾಗದಲ್ಲಿ ಬರಪೀಡಿತವೆಂದು ಘೋಷಿಸಿರುವ 15 ತಾಲ್ಲೂಕುಗಳಲ್ಲಿ ಬರಪರಿಹಾರ ಕಾರ್ಯಗಳನ್ನು ಕೈಗೊಳ್ಳಲು ಪ್ರತಿ ತಾಲ್ಲೂಕಿಗೆ ರೂ. 1 ಕೋಟಿಯಂತೆ ಕೆಳಕಂಡಂತೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬಳ್ಳಾರಿ | 600.00 |
| 2 | ಕೊಪ್ಪಳ | 400.00 |
| 3 | ರಾಯಚೂರು | 500.00 |
| 4 | ಗುಲ್ಬರ್ಗಾ | 1000.00 |
| 5 | ಬೀದರ್ | 500.00 |
| 6 | ಬೆಳಗಾಂ | 400.00 |

| | | |
|---|---|---|
| 7 | ಬಾಗಲಕೋಟೆ | 400.00 |
| 8 | ಬಿಜಾಪುರ | 500.00 |
| 9 | ಗದಗ | 200.00 |
| | ಒಟ್ಟು | 4500.00 |

(ರೂ. ನಾಲ್ಕು ಸಾವಿರದ ಐದುನೂರು ಲಕ್ಷಗಳು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಕೆಳಕಂಡಂತೆ ಬರಪರಿಹಾರ ಕಾರ್ಯಕೈಗೊಳ್ಳಲು ಉಪಯೋಗಿಸುವುದು.

1) ಕುಡಿಯುವ ನೀರು

2) ಮೇವು ಸರಬರಾಜು

3) ಗೋಶಾಲೆ ತೆರೆಯುವುದು

ಕೇಂದ್ರ ಸರ್ಕಾರವು ದಿನಾಂಕ:27.6.2007ರಂದು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚಮಾಡುವುದು, ಹಾಗೂ ಪರಿಹಾರ ಕಾರ್ಯಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 692 ವೆಚ್ಚ–7/2009 ದಿನಾಂಕ:26.8.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2081

**ಎಂ.ಎಸ್. ದೇಸಾಯಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 10,000 ಕಿಮೀ. ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳ ಕಾಮಗಾರಿಗಳನ್ನು ಪಿಪಿಪಿ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಲೋಇ 01 ಇಎಪಿ 2009, ಬೆಂಗಳೂರು, ದಿನಾಂಕ:31.3.2009

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ:ಕರಅನಿನಿ/ವ್ಯ.ನಿ./2009–10/ದಿನಾಂಕ:26.6.2009.

**ಪ್ರಸ್ತಾವನೆ:**

ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕರ್ನಾಟಕ ರಸ್ತೆ ನಿಧಿಯ ಅಡಿಯಲ್ಲಿ ಲೆಕ್ಕಶೀರ್ಷಿಕೆ "5054–80–800–0–02–172 Roads (ಯೋಜನೆ)" ಅಡಿಯಲ್ಲಿ 250.00 ಕೋಟಿ ರೂ.ಗಳನ್ನು (ಇನ್ನೂರ ಐವತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ಸದರಿ ಮೊತ್ತವನ್ನು ಬೆಂಗಳೂರು (ನಗರ) ಖಜಾನೆಗೆ ಲೆಕ್ಕ ಶೀರ್ಷಿಕೆ "8449–00–120–9–36 Deposit Account of Karnataka Raod Fund in the Public Account of the State" ಗೆ ವರ್ಗಾಯಿಸಿ ಕ್ರೆಡಿಟ್ ಮಾಡಲು ಸೂಚಿಸಲಾಗಿತ್ತು.

ರಾಜ್ಯದಲ್ಲಿ ಪಿಪಿಪಿ ಯೋಜನೆಯಡಿಯಲ್ಲಿ ಮೊದಲನೇ ಹಂತದಲ್ಲಿ ಸುಮಾರು 10.000ಕಿಮೀ ರಸ್ತೆಗಳ ಅಭಿವೃದ್ಧಿಯನ್ನು ಕೈಗೊಳ್ಳಲು ಯೋಜಿಸಿದ್ದು, ಯೋಜನಾ ವರದಿಯನ್ನು ತಯಾರಿಸುವ ಸಲುವಾಗಿ Transaction Advisor ಆಗಿ ನೇಮಕವಾಗಿರುವ iDeck ಸಂಸ್ಥೆಗೆ ನೇರವಾಗಿ ವಹಿಸಲಾಗಿದೆ, iDeck ಸಂಸ್ಥೆಯು ಯೋಜನಾ ವರದಿಯಲ್ಲಿನ ತಾಂತ್ರಿಕ ವರದಿಯನ್ನು ತಯಾರಿಸಲು ತಾಂತ್ರಿಕ ಸಲಹೆಗಾರರನ್ನು ನೇಮಿಸಿಕೊಳ್ಳಬೇಕಾಗುತ್ತದೆ. ಮೇಲಿನ ಯೋಜನಾ ವರದಿಯನ್ನು ತಯಾರಿಸಲು ಸುಮಾರು 16 ಕೋಟಿ ರೂ.ಗಳ ಅವಶ್ಯಕತೆ ಇರುವುದಾಗಿ ಅಂದಾಜಿಸಲಾಗಿದೆ.

ಸದ್ಯಕ್ಕೆ 7 ಪ್ಯಾಕೇಜುಗಳ ಕಾಮಗಾರಿಗಳನ್ನು ಪಿಪಿಪಿ ಮಾದರಿಯಲ್ಲಿ ಕೈಗೊಳ್ಳಲು ಉದ್ದೇಶಿಸಿದ್ದು ಅವುಗಳ ಯೋಜನಾ ವರದಿ ತಯಾರಿಕೆಯ ಕಾರ್ಯವನ್ನು ಪ್ರಾರಂಭಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರು ಪಿಪಿಪಿ ಯೋಜನೆಯ ಯೋಜನಾ ವರದಿಗಳನ್ನು ತಯಾರಿಸುವ ವೆಚ್ಚಕ್ಕಾಗಿ 16.00ಕೋಟಿ ರೂ.ಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಿ ಪಿಡಿ ಅಕೌಂಟ್‌ನಲ್ಲಿ ಕ್ರೆಡಿಟ್ ಮಾಡಿರುವ 250.00 ಕೋಟಿ ರೂ.ಗಳಲ್ಲಿ ಸದ್ಯಕ್ಕೆ 10.00 ಕೋಟಿ ರೂ.ಗಳನ್ನು ಡ್ರಾ ಮಾಡಲು ಮತ್ತು ಈ 10 ಕೋಟಿ ರೂ.ಗಳನ್ನು ವೆಚ್ಚ ಮಾಡಿದ ನಂತರ ಉಳಿದ 6.00 ಕೋಟಿ ರೂ.ಗಳನ್ನು ಡ್ರಾ ಮಾಡಲು ಕರ್ನಾಟಕ ರಸ್ತೆ ಅಬಿವೃದ್ಧಿ ನಿಗಮ ನಿಯಮಿತಕ್ಕೆ ಅನುಮತಿ ನೀಡಲು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 86 ಇಎಪಿ 2009 ಬೆಂಗಳೂರು, ದಿನಾಂಕ:22ನೇ ಆಗಸ್ಟ್, 2009**

2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕರ್ನಾಟಕ ರಸ್ತೆ ನಿಧಿಯ ಅಡಿಯಲ್ಲಿ ಲೆಕ್ಕಶೀರ್ಷಿಕೆ "5054–80–800–0–02–172 Roads (ಯೋಜನೆ)" ಅಡಿಯಲ್ಲಿ 250.00 ಕೋಟಿ ರೂ.ಗಳನ್ನು (ಇನ್ನೂರ ಐವತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ಸದರಿ ಮೊತ್ತವನ್ನು ಬೆಂಗಳೂರು (ನಗರ) ಖಜಾನೆಗೆ ಲೆಕ್ಕ ಶೀರ್ಷಿಕೆ "8449–00–120–9–36 Despoit Account of Karnataka Road Fund in the Public Account of the State" ಗೆ ವರ್ಗಾಯಿಸಿ ಕ್ರೆಡಿಟ್ ಮಾಡಲು ಸೂಚಿಸಲಾಗಿತ್ತು.

ಈ 250.00 ಕೋಟಿ ರೂ.ಗಳ ಮೊತ್ತದಲ್ಲಿ ಸದ್ಯಕ್ಕೆ 10.00 ಕೋಟಿ ರೂ.ಗಳನ್ನು ಪಿಡಿ ಅಕೌಂಟ್‌ನಿಂದ ಡ್ರಾ ಮಾಡಲು ಮತ್ತು 10.00 ಕೋಟಿ ರೂ.ಗಳನ್ನು ಖರ್ಚು ಮಾಡಿದ ನಂತರ 6.00 ಕೋಟಿ ರೂ.ಗಳನ್ನು ಪಿಪಿಪಿ ಯೋಜನೆಗಳ ಸಲಹೆಗಾರರ ಬಿಲ್ಲು ಪಾವತಿಗಾಗಿ ಡ್ರಾ ಮಾಡಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಅನುಮತಿ ನೀಡಲಾಗಿದೆ.

ಮುಂದುವರೆದು, 16.00 ಕೋಟಿ (ಹದಿನಾರು ಕೋಟಿ ರೂಪಾಯಿಗಳು ಮಾತ್ರ) ರೂ.ಗಳ ಬಿಲ್ಲನ್ನು ಕೆ.ಎಫ್.ಸಿ 17(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸಿ, ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ:ಲೋಇ 547 ಆಕೋ–1/09 ದಿನಾಂಕ:19.8.2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2091

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ

(ಇಎಪಿ)

## ಇಂಧನ ಸಚಿವಾಲಯ

**ವಿಷಯ :** ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1 ಸರ್ಕಾರಿ ಅಧಿಸೂಚನೆ ಸಂಖ್ಯೆ:ಡಿಇ 14 ಪಿಎಸ್ ಆರ್ 2002 ದಿನಾಂಕ:31.5.02
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್ ಆರ್ 2002 ದಿನಾಂಕ:19.12.02
3. ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ
ಅ) ಪತ್ರ ಸಂಖ್ಯೆ: ನಿ (ಪಿ ಮತ್ತು ಉಟ್ರಸ್ಟ್) ಕ–21/ಹಿಸ–2/846–848 ದಿನಾಂಕ:5.3.2009
ಆ) ಪತ್ರ ಸಂಖ್ಯೆ: ನಿ (ಪಿ ಮತ್ತು ಉಟ್ರಸ್ಟ್)ಕ–21/ಹಿಸ–2/891–93 ದಿನಾಂಕ:17.3.2009
ಇ) ಪತ್ರ ಸಂಖ್ಯೆ: ನಿ (ಪಿ ಮತ್ತು ಉಟ್ರಸ್ಟ್) ಕ–21/ಹಿಸ–2/11046 ದಿನಾಂಕ:4.5.2009.
4. ಸರ್ಕಾರಿ ಆದೇಶ ಸಂಖ್ಯೆ:ಇಎನ್ 33 ಪಿಎಸ್‌ಆರ್ 2009 ದಿನಾಂಕ:4.6.2009
5. ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ ಪತ್ರ ಸಂಖ್ಯೆ: ನಿ(ಪಿ ಮತ್ತು ಉಟ್ರಸ್ಟ್) /ಎಎಒ/ಹಿಸ–1/1370–73 ದಿನಾಂಕ:10.8.2009.

**ಪ್ರಸ್ತಾವನೆ:**

(1) ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ಚಿಲ್ಲರೆ ಸರಬರಾಜು ಕಂಪನಿಗಳಿಗೆ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ

ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕ.ವಿ.ಪ್ರ.ನಿ.ನಿ.ಗೆ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

(2) ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ಪ್ರಕಾರ, ಕ.ವಿ.ಪ್ರ.ನಿ.ನಿ. ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು "ಕ.ವಿ.ಪ್ರ.ನಿ.ನಿ. ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ Pay as you go ಪದ್ಧತಿಯನ್ನು ಅನುಸರಿಸಿ ಕ.ವಿ.ಪ್ರ.ನಿ.ನಿ. ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

(3) ಮೇಲೆ ಕ್ರಮಾಂಕ–3ರಲ್ಲಿ ಓದಲಾದ ಪತ್ರಗಳಲ್ಲಿ, ಪಿಂಚಣಿ ಹಣ 300ಕೋಟಿ ರೂ.ಗಳನ್ನು ಆರ್ಥಿಕ ವರ್ಷ 2009–10 ಕ್ಕೆ ಪಾವತಿಸಲು ಹಾಗೂ ಹಿಂದಿನ ಬಾಕಿ 489.31 ಕೋಟಿ ರೂ.ಗಳನ್ನು ಪಾವತಿಸಲು ಕ.ವಿ.ಪ್ರ.ನಿ.ನಿ. ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್ ಸರ್ಕಾರವನ್ನು ಕೋರಿರುತ್ತಾರೆ.

(4) 2009–10ನೇ ಸಾಲಿನ ಆಯವ್ಯಯದಲ್ಲಿ "2801–80–101–1–13–106 (ಯೋಜನೇತರ) ಸಹಾಯಧನ" ಲೆಕ್ಕಶೀರ್ಷಿಕೆಯಡಿಯಲ್ಲಿ 300 ಕೋಟಿ ರೂ.ಗಳನ್ನು ಒದಗಿಸಲಾಗಿರುತ್ತದೆ. ಮೇಲೆ ಕ್ರಮಾಂಕ–4ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕವಿಪ್ರನಿನಿ ಮತ್ತು ಎಲ್ಲಾ ಪಿಂಚಣಿ ಟ್ರಸ್ಟ್‌ಗಳಿಗೆ 100 ಕೋಟಿ ರೂ. ಬಿಡುಗಡೆ ಮಾಡಲಾಗಿದೆ.

(5) ಮೇಲೆ ಕ್ರಮಾಂಕ–5ರಲ್ಲಿ ಓದಲಾದ ಪತ್ರದಲ್ಲಿ ಕವಿಪ್ರನಿನಿ ಮತ್ತು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಗಳ ಅಧ್ಯಕ್ಷರು ಪ್ರಸ್ತುತ ಸಾಲಿನ ಬಾಕಿ ಮತ್ತು ಹಿಂದಿನ ಬಾಕಿ ಪಿಂಚಣಿ ಹಣವನ್ನು ಪಾವತಿಸಲು ಕೋರಿರುತ್ತಾರೆ.

(6) ಟ್ರಸ್ಟ್‌ಗಳ ಕೋರಿಕೆಯಂತೆ 2009–10ನೇ ಸಾಲಿನಲ್ಲಿ ಎರಡನೇ ಕಂತು 100 ಕೋಟಿ ರೂ.ಗಳ ಅನುದಾನ ಬಿಡುಗಡೆ ಮಾಡುವ ಕುರಿತು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 33 ಪಿಎಸ್‌ಆರ್ 2009, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2009**

ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ 2009–10ನೇ ಸಾಲಿನಲ್ಲಿ ಹಿಂದಿನ ವರ್ಷಗಳ ಮತ್ತು ಪ್ರಸ್ತುತ ಸಾಲಿನ ಪಿಂಚಣಿ ಪಾವತಿ ಸಲುವಾಗಿ 100 ಕೋಟಿ ರೂ.ಗಳನ್ನು (ನೂರು ಕೋಟಿ ರೂ.ಗಳು ಮಾತ್ರ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದೆ.

ಸದರಿ ವೆಚ್ಚವನ್ನು "2801–80–101–1–13–106 ಸಹಾಯಧನ (ಯೋಜನೇತರ)" ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಹಣವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್ ಗಳಿಗೆ" ಹಣ ಪಡೆದ 2 ದಿನದೊಳಗೆ ಪೂರ್ಣವಾಗಿ ಪಾವತಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

(i) Exact details of the demand for this year validated by actuarial valuation

(ii) Exact outflow that has occurred for 700 or more employees over the years as well as the median number of years, to calculate the outgo per year which could be deducted per year from Government of Karnataka share to reconcile with the approxmimation done.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 449 ವೆಚ್ಚಗಳು–1/2009 ದಿನಾಂಕ:22.8.2009 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2092

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2009–10ರ ಹಣಕಾಸು ವರ್ಷದಲ್ಲಿ ಎರಡನೇ ಕಂತಿನ ಸಹಾಯಾನುದಾನ ಬಿಡುಗಡೆ ಕುರಿತು.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ:ಇಎನ್ 39 ಪಿಎಸ್ಆರ್ 2009 ದಿನಾಂಕ:25.8.2009.

**ಪ್ರಸ್ತಾವನೆ:**

1. 2009–10ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು (ಸಂಪುಟ–7)ರಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ರೂಪದಲ್ಲಿ ರೂ. 190.00 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿದೆ. ಸದರಿ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2009–10ರ ಮೊದಲನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ 48 ಲಕ್ಷ ರೂ. ಗಳನ್ನು ಬಿಡುಗಡೆ ಮಾಡಲಾಗಿದೆ.
3. ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2009–10ನೇ ಸಾಲಿಗೆ ಎರಡನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 45,63,252/–ನ್ನು ಕರ್ನಾಟಕ ವಿದ್ಯುತ್ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 39 ಪಿಎಸ್ಆರ್ 2009, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2009**

ಸರ್ಕಾರವು 2009–10ನೇ ಹಣಕಾಸು ವರ್ಷದ ಎರಡನೇ ತ್ರೈಮಾಸಿಕ ಅವಧಿಗೆ "2801–80–101–1–07 (Grant-in-aid)(Non Plan) ರಲ್ಲಿ ಸಹಾಯಾನುದಾನ" ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 45,63,252/– (ನಲವತ್ತೈದು ಲಕ್ಷದ ಅರವತ್ತ ಮೂರು ಸಾವಿರದ ಇನ್ನೂರೈವತ್ತೆರಡು ರೂ.ಗಳು ಮಾತ್ರ)ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುತ್‌ಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆಯ ಇವರ ಮೇಲು ರುಜುವನ್ನು " Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ:2.9.2006 ಮತ್ತು ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ:16.5.2008ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2093

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸದಸ್ಯರ ಖಾಲಿ ಇರುವ ಹುದ್ದೆ ಭರ್ತಿ ಮಾಡಲು, ಜಾಹೀರಾತು ಪ್ರಕಟಣೆ ವೆಚ್ಚವನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಪಾವತಿಸುವ ಬಗ್ಗೆ,

**ಓದಲಾಗಿದೆ :**

1 ಸರ್ಕಾರಿ ಆದೇಶ ಸಂಖ್ಯೆ:ಇಎನ್ 119 ಪಿಎಸ್ಆರ್ 2007 ದಿನಾಂಕ:8.2.2008.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 119 ಪಿಎಸ್ಆರ್ 2007 ದಿನಾಂಕ:19.7.2008
3. ಸರ್ಕಾರದ ಪತ್ರ ಸಂಖ್ಯೆ:ಇಎನ್ 20 ಪಿಎಸ್ಆರ್ 2008 ದಿನಾಂಕ:29.2.2008
4. ಸರ್ಕಾರಿ ಪತ್ರ ಸಂಖ್ಯೆ:ಇಎನ್ 20 ಪಿಎಸ್ಆರ್ 2008 ದಿನಾಂಕ:6.8.2008 & 14.8.2008
5. ವಾರ್ತಾ ಇಲಾಖೆ ಪತ್ರ ಸಂಖ್ಯೆ:ವಾಇ:ವಾಪ್ರವಿ:ಸ2:3393 ದಿನಾಂಕ:1.3.2008
6. ಸರ್ಕಾರಿ ಪತ್ರ ಸಂಖ್ಯೆ:ಇಎನ್ 20 ಪಿಎಸ್ಆರ್ 2008 ದಿನಾಂಕ:22.8.2008
7. ಬೆಸ್ಕಾಂ ಪತ್ರ ಸಂಖ್ಯೆ:ಬೆವಿಕಂ/ಬಿಸಿ 32/ಎಮ್/2008–09/009 ದಿನಾಂಕ:2.4.2009

**ಪ್ರಸ್ತಾವನೆ:**

(1) ಮೇಲೆ ಕ್ರಮಾಂಕ 1 ಮತ್ತು 2 ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದಲ್ಲಿ 12–3–2008 ಮತ್ತು 14.7.2008 ರಂದು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸದಸ್ಯರುಗಳ ತೆರವಾದ ಹುದ್ದೆಯನ್ನು ಭರ್ತಿ ಮಾಡಲು, ವಿದ್ಯುಚ್ಛಕ್ತಿ ಅಧಿನಿಯಮ 2003 ಕಲಂ 85 (1)ರ ಪ್ರಕಾರ, ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು.

(2) ಮೇಲೆ ಕ್ರಮಾಂಕ–3 ಮತ್ತು 4 ರಲ್ಲಿ ಓದಲಾದ ಪತ್ರಗಳಲ್ಲಿ ಕವಿಪ್ರನಿನಿ ಸದಸ್ಯರ ಹುದ್ದೆಯನ್ನು ತುಂಬಲು, ಅಧಿಸೂಚನೆಯ ಜಾಹಿರಾತನ್ನು ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸಲು ವಾರ್ತಾ ಇಲಾಖೆಯನ್ನು ಕೋರಲಾಗಿತ್ತು.

(3) ಮೇಲೆ ಕ್ರಮಾಂಕ–5ರಲ್ಲಿ ಓದಲಾದ ಪತ್ರದಲ್ಲಿ, ಜಾಹೀರಾತು ವೆಚ್ಚವನ್ನು ಸಂಬಂಧಪಟ್ಟ ಪತ್ರಿಕೆದಾರರಿಗೆ ಪಾವತಿಸಲು ವಾರ್ತಾ ಇಲಾಖೆ ಕೋರಿರುತ್ತದೆ.

(4) ಮೇಲೆ ಕ್ರಮಾಂಕ–6ರಲ್ಲಿ ಓದಲಾದ ಪತ್ರದಲ್ಲಿ ವಾರ್ತಾ ಇಲಾಖೆಯಿಂದ ದೃಢೀಕರಿಸಿದ ಜಾಹೀರಾತು ಪ್ರಕಟಿತ ವೆಚ್ಚವನ್ನು ಸಂಬಂಧಪಟ್ಟ ದಿನ ಪತ್ರಿಕೆಯವರಿಗೆ ಸರ್ಕಾರದ ಪರವಾಗಿ ಪಾವತಿಸಲು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ತಿಳಿಸಲಾಗಿತ್ತು.

(5) ಮೇಲೆ ಕ್ರಮಾಂಕ–7ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಜಾಹೀರಾತು ಪ್ರಕಟಣೆಗೊಳಿಸಿ ಸರ್ಕಾರದ ಪರವಾಗಿ ಪಾವತಿಸಿರುವುದಕ್ಕೆ ಈ ಕೆಳಕಂಡಂತೆ ವಿವರಣೆ ನೀಡಿ, ರೂ. 2,36,748/– ಗಳನ್ನು ಮರುಪಾವತಿಸಲು ಕೋರಿರುತ್ತದೆ.

| ಕ್ರ. ಸಂ. | ವಿವರ | ಬಿಲ್ಲು ಸಂಖ್ಯೆ | ಬಿಲ್ಲು ದಿನಾಂಕ | ಬಿಲ್ಲು ಮೊಬಲಗು ರೂ. | ಒಟ್ಟು ರೂ. | ಬೆವಿಕಂ ಬಿಲ್ಲು ಪಾವತಿಸಿದ ಚೆಕ್/ದಿನಾಂಕ |
|---|---|---|---|---|---|---|
| 1 | Prajavani | ADB 2008011888<br>ADB2008012525 | 7.8.2008.<br>7.8.2008 | 24,300<br>25,920 | 50,220 | 311510/<br>14.10.2008 |
| 2 | Economic Times | No. 5188570/001<br>No/. 5188573/001 | 8.8.2008<br>13.8.2008 | 45,00870<br>856 | 1,15,864 | 852508/<br>17-1-2009 |
| 3 | Indian Express | LAB/36506<br>LAB/36468 | 8.8.2008<br>7.8.2008 | 6,600<br>5,720 | 12,320 | 311505/<br>14.10.2008 |
| 4 | Times of India | No:70855<br>No. 70856 | 7.8.2008<br>8.8.2008 | 3,3803,<br>380 | 6,760 | 311506/<br>14-10-2008 |
| 5 | Vijaya Karnataka | No.70641<br>No. 70666 | 7.8.2008<br>8.8.2008 | 25,792<br>25,792 | 51,584 | 311506/<br>14.10.2008 |
| | Total | | | | 2,36,748 | |

6 ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಕೋರಿಕೆಯನ್ನು ಪರಿಶೀಲಿಸಿ ರೂ. 2,36,748/–ನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಪಾವತಿಸಲು ಈ ಕೆಳಗಿನಂತೆ ಆದೇಶಿಸಿಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 39 ಪಿಎಸ್‌ಆರ್ 2009, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದಲ್ಲಿ, ಕರ್ನಾಟಕ ವಿದ್ಯುಚ್ಛಕಿ ನಿಯಂತ್ರಣ ಆಯೋಗದ ಸದಸ್ಯರ ಹುದ್ದೆಗೆ ಅರ್ಜಿಯನ್ನು ಆಹ್ವಾನಿಸಲು ಆಗಸ್ಟ್ 2008 ರ ದಿನಪತ್ರಿಕೆಗಳಲ್ಲಿ, ಜಾಹೀರಾತು ಪ್ರಕಟಿಸಿದ ವೆಚ್ಚ ರೂ. 2,36,748/– (ಎರಡು ಲಕ್ಷ ಮೂವತ್ತಾರು ಸಾವಿರದ ಏಳೂನೂರ ನಲವತ್ತೆಂಟು ರೂ.ಗಳು) ಮಾತ್ರ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ "2801–80–101–1–07 ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ಸಹಾಯಾನುದಾನ (ಯೋಜನೇತರ)" ಲೆಕ್ಕ ಶೀರ್ಷಿಕೆಯಡಿ ಬಿಡುಗಡೆ ಮಾಡಿದೆ,

ವ್ಯವಸ್ಥಾಪಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಇವರು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆಯವರ ಮೇಲು ರುಜುವನ್ನು" Payees Receipt" ನಲ್ಲಿ ಪಡೆದು ಹಣವನ್ನು ನಿರ್ದೇಶಕರು, ರಾಜ್ಯ ಹುಜೂರು ಖಜಾನೆಯವರಿಂದ ಪಡೆಯುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಯು ಅ. ಟಿ ಸಂಖ್ಯೆ : FD 1357 Exp-I 2008 ದಿನಾಂಕ:21.8.2009ರಲ್ಲಿ ನೀಡಿದ ಸಹಮತಿಯ ಮೇರೆಗೆ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2094

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## WATER RESOURCES SECRETARIAT

**Sub:** Extension of time for the World Bank assisted Karnataka Community Based Tank Management Project Phase-1 and to take up additional 694 tanks out of savings in the Phase-1 in the uncovered taluks of the same districts- orders reg.

**Read:**
1. Govt. Order, No. SANIYI 29 JSY 2002, Dated:27.3.2008
2. Letter No. DO No. 3.6.00 FB III dated:29.10.2008
3. Letter dated:21.11.2008 from World Bank.
4. Proceedings of the State Level Co-ordination Committee meeting held on 30.5.2009.
5. Correpondence ending with the letter no. JSYS-Bang-Adm-779/2008-09 dt:20.4.2009 from the Executive Director. JSYS.

**PREAMBLE:**

Government of Karnataka through a nodal agency Jala Samvardhana Yojana Sangha is already implementing the Karnataka Community Based Tank Management Project (KCBTMP) in 34 taluks of 10 districts in the State (Kolar, Chikkaballapur (New district), Tumkur, Chitradurga, Raichur Haveri, Bagalkot, Bidar, Koppal, and Bellary) with World Bank assistance Implementation of Integrated Tank Development Plans in respect of 2005 tanks is already underway at a total project cost of Rs. 670.60 crores consisting of Rs. 530.18 crores from World Bank, Rs., 114.13 crores from the Government of Karnataka and Rs. 26.29 crores from the Tank Users (being community contribution). This has been subsequently reduced to Rs. 508.63 Crores due to allocation to tsunami relief. The objective of the World Bank aided Project is to improve rural livelihoods and reduce poverty by developing and strengthening community-based approaches for improving and managing selected Tank Systems.

The World Bank, Govt of India and Govt. of Karnataka were signed the Project agreement on 4.6.2002 and the project commenced with effect from 8.7.2002 The project period was upto 31st Aug 2008 and the same was extended upto 31st Jan 2009.

The project was planned to implement 2005 tanks in the selected taluks within the project period, however the same could not be achived due to various factors, About 176 takn systems are still under pre planning stage.

The Executiv Committee of the Jala Samvardhana Yojana Sangha in its 20th and 21st meeting held on 14.10.2008 has given the concurrence for extension of closing date upto 31st Jan 2012 and to take up additional 694 taknks under the project at a cost Rs.177.94 Crores out of the likely savings in the Phase-1 Project The Government of India in their letter read at (2) above, conveyed its concurrence to extend the closing date of the original project Karnataka Community Based Tank Management Project (KCBTMP) upto 31st Jan 2012. The Acting Country Director, India, World Bank in his letter read at (3) above has also conveyed the concurrence of the World Bank to extend the closing date of the project upto 31st Jan 2012. The State Level Co-ordination Committee in its meeting held on 30.5.2009 has approved the proposal for extension of time for the Phase-1 project and also to take up additional 694 tanks under the project at cose Rs. 177.94 Crores, which will be met from the anticipated savings in the Phase-1 project.

Hence the following order.

**Government Order No. SANIYI 4 JASAMYO 2008, Bangalore, Dated:31st August, 2009**

In the circumstances mentioned in the preamble, sanction is accorded (a) for extension of closing date of the Phase-1 project of Karnataka Community Based Tank Management project with World Bank assistance upto 31st Jan 2012 and (b) to take up the additional 694 tanks under the project at a cost of

Rs. 177.94 Crores which will be met from the anticipated savings in the Phase-1 project in the uncovered taluks, of the same districts (Kolar Chikkaballapur (New district), Tumkur, Chitradurga, Raichur, Haveri, Bagalkot, Bida, Koppal, Bellary).

By order and in the name of Governor of Karnataka

P.R. 2095

**K. SUDHAKARA SHETTY**

Under Secretary to Government

Water Resources Department (Minor Irrigation)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ರಾಜ್ಯ ಮಟ್ಟದ ಅಣೆಕಟ್ಟು ಸುರಕ್ಷತಾ ಸಮಿತಿ (SLDSC) ಯ ಅಧಿಕಾರೇತರ ಸದಸ್ಯರಿಗೆ ನೀಡುವ ಸಭಾ ಭತ್ಯೆಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**

1 ಸರ್ಕಾರಿ ಆದೇಶ ಸಂಖ್ಯೆ: ಜಸಂಇ 03 ಅಭಯೋ 2008 ಬೆಂಗಳೂರು, ದಿನಾಂಕ:7.1.2009

2. ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 2 ಎಸ್‌ಆರ್‌ಎ 99 ದಿನಾಂಕ:22.4.1999

3. ಶ್ರೀ ಆರ್.ಹೆಚ್. ಸಾವ್ ಕಾರ್, ಅಧಿಕಾರೇತರ ಸದಸ್ಯರು, ರಾಜ್ಯ ಮಟ್ಟದ ಅಣೆಕಟ್ಟು ಸುರಕ್ಷತಾ ಸಮಿತಿ ರವರು ನಿರ್ದೇಶಕರು, ಕ.ಇಂ.ಸಂ.ಕೇ., ಕೆ.ಆರ್. ಸಾಗರರವರಿಗೆ ಬರೆದಿರುವ ಪತ್ರ ದಿ:18.11.2008.

4. ನಿರ್ದೇಶಕರು, ಕ.ಇಂ.ಸಂ.ಕೇ., ಕೆ.ಆರ್. ಸಾಗರ ಇವರ ಪತ್ರ ಸಂಖ್ಯೆ:4487/22–12–2008 ಹಾಗೂ 5529/12.2.2009.

**ಪ್ರಸ್ತಾವನೆ:**

(1) ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಝ್ಯು ಮಟ್ಟದ ಅಣೆಕಟ್ಟು ಸುರಕ್ಷತಾ ಸಮಿತಿಯನ್ನು (SLDSC) ಪುನರ್ ರಚಿಸಲಾಗಿದ್ದು, ಈ ಸಮಿತಿಯು ಹಾಲಿ ಚಾಲ್ತಿಯಲ್ಲಿರುತ್ತದೆ. ಸದರಿ ಸಮಿತಿಯ ಅಧಿಕಾರೇತರ ಸದಸ್ಯರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದನ್ವಯ ಪ್ರಯಾಣ ಭತ್ಯೆ, ದಿನ ಭತ್ಯೆ ಮತ್ತು ಸಭಾ ಭತ್ಯೆಯನ್ನು ನೀಡಲಾಗುತ್ತಿದೆ.

(2) ಮೇಲೆ ಓದಲಾದ ಕ್ರಮ ಸಂಖ್ಯೆ (3) ರನ್ವಯ, ಶ್ರೀ ಆರ್.ಹೆಚ್. ಸಾವಕಾರ್, ಅಧಿಕಾರೇತರ ಸದಸ್ಯರು, ದಿನವೊಂದಕ್ಕೆ SLDSC ನೀಡಲಾಗುವ ರೂ. 150/–ಗಳ ಸಭಾಭತ್ಯೆಯನ್ನು ಹೆಚ್ಚಿಸುವಂತೆ, ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ (ಕ.ಇಂಸಂ.ಕೇ) ಕೃ.ರಾ. ಸಾಗರ ಹಾಗೂ ಸದಸ್ಯ ಕಾರ್ಯದರ್ಶಿ, ರವರನ್ನು SLDSC ರವರನ್ನು ಕೋರಿರುತ್ತಾರೆ.

(3) ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ನಿರ್ದೇಶಕರು, ಕ.ಇಂ.ಸಂ.ಕೇ., ಹಾಗೂ ಸದಸ್ಯ ಕಾರ್ಯದರ್ಶಿ, SLDSC ರವರು ಶ್ರೀ ಆರ್.,ಹೆಚ್. ಸಾವಕಾರ್ ರವರ ಕೋರಿಕೆಯ ಮೇರೆಗೆ SLDSC ಯ ಅಧಿಕಾರೇತರ ಸದಸ್ಯರಿಗೆ ನೀಡಲಾಗುತ್ತಿರುವ ಸಭಾ ಭತ್ಯೆಯನ್ನು ರೂ. 1500/–ಕ್ಕೆ ಹೆಚ್ಚಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

(4) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಸಭಾಭತ್ಯೆಗೆ ಸಂಬಂಧಿಸಿದಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಜಸಂಇ 03 ಅಭಯೋ 2008, ಬೆಂಗಳೂರು, ದಿನಾಂಕ:1ನೇ ಸೆಪ್ಟೆಂಬರ್, 2009**

(1) ರಾಜ್ಯ ಮಟ್ಟದ ಅಣೆಕಟ್ಟು ಸುರಕ್ಷತಾ ಸಮಿತಿಯ (SLDSC) ಅಧಿಕಾರೇತರ ಸದಸ್ಯರುಗಳು ಸಭೆ ನಡೆಯುವ ದಿನಗಳಲ್ಲಿ, ದಿನವೊಂದಕ್ಕೆ ರೂ. 1000/–ಗಳ ಸಭಾ ಭತ್ಯೆಯನ್ನು (Sitting fees) ಹಾಗೂ, ನಿಯಮಾನುಸಾರ ಪ್ರಯಾಣ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಈ ಸಂಬಂಧದ ಬಿಲ್ಲುಗಳನ್ನು ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೃ.ರಾ. ಸಾಗರ ರವರು ಪಾವತಿಸಲು ಕ್ರಮ ಕೈಗೊಳ್ಳತಕ್ಕದ್ದು.

(2) ಈ ಮೇಲಿನ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಜಸಂಇ 03 ಅಭಯೋ 2008 ಬೆಂಗಳೂರು, ದಿನಾಂಕ:7.1.2009ದೊಡನೆ ಓದಿಕೊಳ್ಳುವುದು ಹಾಗೂ ಈ ಆದೇಶವು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ. ಈ ಸಮಿತಿಯ ಅಧಿಕಾರೇತರ ಸದಸ್ಯರುಗಳಿಗೆ ನಿಗಧಿಪಡಿಸಿರುವ ಸಭಾಭತ್ಯೆಗೆ ಸಂಬಂಧಿಸಿದಂತೆ ಈ ಹಿಂದೆ ಹೊರಡಿಸಲಾದ ಎಲ್ಲಾ ಸರ್ಕಾರದ ಆದೇಶಗಳನ್ನು ಅಧಿಕ್ರಮಿಸಲಾಗಿದೆ (Superceded).

(3) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ/469/ಆಕೋ–1/09 ದಿನಾಂಕ:20–7–2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2096

**ಹೆಚ್. ಪರಶುರಾಮ್**

ಸರ್ಕಾರದ ಉಪ ಕಾರ್ಯದರ್ಶಿ (ಕೆ.ಬಿ.ಜೆ.ಎನ್)

ಜಲಸಂಪನ್ಮೂಲ ಇಲಾಖೆ

## HEALTH AND FAMILY WELFARE SECRETARIAT

**Sub:** Hiring of a Consultant for Liquid Waste Management

**Read:** Govt Order No.HFW (PR) 97 WBA 2009, dt:21.7.2009.

**PREAMBLE:**

Environment safeguards and Environment Management Planning are an integral part of the Karnataka Health System Development and Reform Project's goals. The Project has ceated a Health Care Waste Management Cell in the Directorate of Health and Family Welfare Services vide G.O. read above. The Cell will monitor all issues related to Health Care Waste Management. Several important posts have also been created in the cell so that the recruited personnel can help implement the objectives of the Environment Mangement Plan of the Project. Liquid Waste Management Plants need to be estableished in various hospitals in the State as part of this activity. They should also conform to the norms of the Karnataka State Pollution Cotrol Board (KSPCB).

In this context, it is also necessary to have a Consultant who can assist the Project in establishing Liquid Waste. Management plants at selected hospitals in the State. Interact with KSPCB in getting the ETP approval, monitor and evaluate Liquid Waste Management facilities at hospitals to provide monthly progress report of ETP plants under construction and other updates.

An Expression of Interest (EoI) was invited from individuals under CQS procedures of the World Bank. The same was published in Vijaya Karnataka and Deccan Herald dt. 20.2.2009 as well as District Tender Bulletin In all, 5 applications were received one of them being a firm. A Committee evaluated the EoIs received Mr. D.N. Ravishankar was found eligible and considered for the consultancy. He was selected as the individual consultant for Liquid Waste Management for a monthly remuneration of Rs. 50.000/- for working 2 half days per week.

Hence, the following order.

**Government Order No. HFW (PR) 106 WBA 2009, Bangalore, Dated:27th August, 2009**

Under the circumstances mentioned in the preamble, Government are pleased to appoint Sri D.N. Ravishankar as a part-time Consultant for Liquid Waste Management in Karnataka Health System Development and Reform Project who will work for 2 Half Days in a week in the Project Office, for a remuneration of Rs. 50, 000/- per month. He shall however be available for interaction and discussion with the Project authorities as and when informed. He shall attend meetings as and when invited.

Following are the Terms of Reference (ToRs) for the Consultant.

**Background:**

The Government of Karnataka with the support of the World Bank, has launched a major reform effort to improve the quality and accessibility of health services provided in the State. The effort is in the context of the Karnataka State Integrated Health Policy 2004, which articulates the states long-term vision for the health sector. The Policy states that the mission of the Department of Health and Family Welfare is to ''provide quality health care with equity, which is responsive to the needs of the people and it is guided by the principlaes of transparency, accountability and community participation''.

The Project constitutes a package of reforms touching several parts of the health system, public and the private These reforms are meant to support the introduction of more transparent and equitable resource allocation criteria better incentive mechanisms, innovative delivery and health financing processes, and eventually better results.

The Environment management programme is an important programme envisaged under the Karnataka Health System Development and Reform Project (KHSDRP). This plan includes environmental management measures (including guidelines for design, construction and operation of hospitals and primary health care facilities, organizational arrangements to implement the training/capacity-building requirements information & commuinication arrangements, consultative processes/ procedures, monitoring arrangements etc.,

An Environmntal Assessment (EA) was carried out to understand the following issues and an Environment Management Plan was therefore prepared:

1) The review of the Indian acts and plicies revealed that the main piece of legislation relevant to this sector is the Bio-Medical Waste (Management and Handling) Rules, 2000, and its various requirements have to be met during implementation.
2) Inadequate planning during the design, construction and operation & maintenance of these primary health care facilities will result in environment problems/issues These issues includes

a) Inadequate provisions and practices in relation to bio-medical management,
b) Poor sanitation facilities
c) Lack of adequate water supply
d) Poor construction and quality of building facilities and lack of adequate operation & maintenance
e) Improper sitting of Priamry Health Care Centres /sub-centres and
f) Lack of awareness on basic good environmental practices.

3) Proper guidelines and best practices should be implemented during the construction of the hospitals and primary health care centres/sub-centres to ensure and maximize the environmental benefits of the EMP. These include guidelines such as those for managing biomedical wastes, sharps, water supply, sewerage & sanitation etc.,
4) Liquid waste management is statutory requirement in hospitals with more than hundred beds. In this regard, KHSDRP is planning to provide Liquid waste management facilities in selected ten hospitals initially in the state.

**OBJECTIVES OF CONSULTANT**

To assist the Project Administrator in designing installing and managing the Liquid waste Management plant in hospitals under Environment Management programme.

To clarify the role of health staff in the working of the Liquid Waste Management Plant under Environment Management Programme (EMP)

**THE TASKS TO BE CARRIED OUT WITH SCHEDULE**

To help establish the Liquid Waste Management plant at selected hospitals in the State Under Environment Management Programme of KHSDRP

To interact with KSPCB in getting the ETP approval

To monitorm and evaluate Liquid Waste Management facilities at hospitals.

To provide a monthly progress report of ETP plants under construction and other updates.

**PERIOD OF CONSULTANCY**

Period of contract is initially for 1 year, extendable on satisfactory performance.

**QUALIFICATION & EXPERIENCE**

Must have Post graduate qualification in Environmental Engineering

Must have minimum of Ten years working experience in the field

Must have experience in monitoring Sewage treatment plant (STP)/ effluent treatment plant (ETP)/ exposure to Karnataka State Pollution Control Board (KSPCB), its rule, regulations, etc/ any statutory Authority on pollution control measures, rules, procedures, thereon.

**METHOD OF SELECTION**

individual consultant-CQS selection as per World Bank guidelines and procedures.

**REPORTS TO BE FURNISHED BY THE CONSULTANT**

Monthly progress report on liquid waste management plant construction, maintence and other issues of ETP plant

Monthly progress reports of ETP plant established at various hospitals.

Annual Reports at the end of year including analytical report of effluents from ETP plant.

Any other works entrusted by the Project Authority regarding EMP.

**DATA, INPUT TO BE PROVIDED BY THE CLIENT**

Environment Assessment Reports and Environment Management Plan

Office accommodation with an independent computer system.

Services of EMP support staff i.e. the Health Care Waste Management Cell.

Travel expenses for field supervision and monitoring as per entitlement to a Class-1 Officer of the State Govt.

**REVIEW COMMITTEE**

The performance of Liquid Waste Management Consultant under EMP will be reviewed by the following Committee.

| | |
|---|---|
| Project Administrator, KHSDRP | Chairman |
| Chief Administrative Officer, KHSDRP | Member |
| Joint Director (Medical), DoHFW | Member |
| Deputy Director (PHCF), KHSDRP | Member Secretary |
| A representative from Karnataka State Pollution Control Board | Member |

- ❖ The Consultant shall hand over all such documents, in soft or hard form as and when required by the Project and /or at the end of the Consultancy
- ❖ He shall make good for any loss of documents /facilities provided by the Client to him in case of any loss or damage to information.
- ❖ He shall submit a monthly report of the assignments taken-up/completed by him, to the Project Administrator, KHSDRP.
- ❖ This contract appointment shall not be considered as permanent for any reasons whatsoever.
- ❖ During the tenure of contract. He shall keep all the official information that is obtained or collected strictly confidential
- ❖ He shall be bound by KCS (Conduct) Rules 1957 and KCS (CCA) Rules as applicable for contract appointment.

❖ In case any of the above conditions is violated, the appointment automatically stands cancelled.

The Consultant shall enter into a contract with the Project authorities. The Deputy Project Administrator-II shall certify the work done by the Consultant each month to facilitate payment of remuneration.

The expenditure in this behalf shall be debited to the Head of Account ''2210-06-800-0-84 (P)'' under Management and Evaluation (M&E) for the corresponding Financial Year.

By order and in the name of Governor of Karnataka

P.R. 2019

**M. SHASHIDHAR**

Deputy Secretary to Government KHSDRP

Health and Family Welfare Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮಾದರಿ ಕರ್ನಾಟಕ ಸಾರ್ವಜನಿಕ ಆರೋಗ್ಯ ಕಾಯ್ದೆಯ ಕರಡನ್ನು ತಯಾರಿಸುವುದಕ್ಕೆ ನೇಮಿಸಿಕೊಳ್ಳಲಾದ ಸಲಹಾ ಸಂಸ್ಥೆಗೆ ಶುಲ್ಕ ಪಾವತಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಎಫ್‌ಡಬ್ಲ್ಯೂ/ಕೆಎಸ್‌ಡಿಪಿ/ಎಸ್‌ಪಿಸಿ–36 ದಿನಾಂಕ:1.7.2004.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಆರೋಗ್ಯ ಕಾಯ್ದೆಯನ್ನು ಜಾರಿಗೆ ತರುವ ಉದ್ದೇಶದಿಂದ ಒಂದು ಮಾದರಿ ಸಾರ್ವಜನಿಕ ಆರೋಗ್ಯ ಕಾಯ್ದೆಯ ಕರಡನ್ನು ತಯಾರಿಸುವ ಕಾರ್ಯವನ್ನು ದಿ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ, ನಾಗರಬಾವಿ, ಬೆಂಗಳೂರು ಇವರಿಗೆ ವಹಿಸಲು ಮತ್ತು ಈ ಸಂಬಂಧ ರೂ. 7,38,000–00 (+ ಅನ್ವಯವಾಗುವಂತೆ ಸೇವಾ ತೆರಿಗೆ)ಗಳನ್ನು ಸಲಹಾ ಶುಲ್ಕವಾಗಿ ಕಂತುಗಳ ಮೂಲಕ ಸದರಿ ಸಂಸ್ಥೆಗೆ ಪಾವತಿಸಲು ಮೇಲೆ ಓದಲಾದ ದಿನಾಂಕ:1.7.2004 ರ ಸರ್ಕಾರದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಈ ಬಗ್ಗೆ ಸದರಿ ಸಂಸ್ಥೆಯೊಂದಿಗೆ ದಿನಾಂಕ:22.7.2004 ರಂದು ಒಂದು ಒಪ್ಪಂದವನ್ನು ಮಾಡಿಕೊಳ್ಳಲಾಗಿತ್ತು. ಒಪ್ಪಂದದಂತೆ ಸದರಿ ಸಂಸ್ಥೆಯು ಈ ಬಗ್ಗೆ ಕಾರ್ಯ ಪ್ರಾರಂಭಿಸಿದ ಕೂಡಲೇ ಶೇ 20 ರಷ್ಟು ಹಣವನ್ನು ಪಾವತಿಸಬೇಕಾಗಿದ್ದು, ಅದರಂತೆ, ದಿನಾಂಕ:4.8.2004 ರಂದು ಮೊದಲ ಕಂತಿನಲ್ಲಿ ರೂ. 1,47,600–00+ ಸೇವಾ ತೆರಿಗೆ ರೂ. 14,760–00 ಒಟ್ಟು ರೂ, 1,62,360–00 ಗಳನ್ನು ಪಾವತಿಸಲಾಗಿದೆ. ಒಪ್ಪಂದದಂತೆ ಸದರಿ ಸಂಸ್ಥೆಯು ಸೆಪ್ಟೆಂಬರ್ 2004 ರ ಅಂತ್ಯಕ್ಕೆ ಅಂತಿಮ ಕರಡು ಮಾದರಿ ಕಾಯ್ದೆಯನ್ನು ತಯಾರಿಸಿ ಒದಗಿಸಬೇಕಾಗಿದ್ದು, ಸಂಸ್ಥೆಯು ತಡವಾಗಿ ಅಂದರೆ, ದಿನಾಂಕ:19.8.2006 ರಂದು ಕರಡು ಮಾದರಿ ಕಾಯ್ದೆಯನ್ನು ತಯಾರಿಸಿ ಒದಗಿಸಿರುತ್ತದೆ. ಒಪ್ಪಂದದಂತೆ ಬಾಕಿ ಹಣವನ್ನು ಪಾವತಿಸಲು ಕೋರಿರುತ್ತಾರೆ. ಸದರಿ ಸಂಸ್ಥೆಯು ವಹಿಸಿದ ಕಾರ್ಯವನ್ನು ಒಪ್ಪಂದದ ಅವಧಿಯೊಳಗೆ ಪೂರ್ಣಗೊಳಿಸದೇ ಇರುವುದರಿಂದ, ಯೋಜನೆಯೊಂದಿಗೆ ದಿನಾಂಕ:12.8.2009 ರಂದು ಒಂದು ಹೊಸ ಒಪ್ಪಂದವನ್ನು ಸಹಿ ಮಾಡಿ ರೂ. 1,47,600–00 ಗಳ 2ನೇ ಕಂತಿನ ಸಲಹಾ ಶುಲ್ಕವನ್ನು ಪಡೆದುಕೊಂಡು, ಈ ಕಾರ್ಯಕ್ಕಾಗಿ ಅಂತಿಮ ಶುಲ್ಕ ಪಾವತಿ ಎಂದು ಪರಿಗಣಿಸಿ ಒಪಪಂದವನ್ನು ಮುಕ್ತಾಯಗೊಳಿಸಲು ಒಪ್ಪಿರುತ್ತದೆ. ಅದರಂತೆ ಸದರಿ ಸಂಸ್ಥೆಗೆ 2ನೇ ಹಾಗೂ ಕೊನೆಯ ಕಂತಿನ ಶುಲ್ಕ ಪಾವತಿ ಮಾಡಲು ಸರ್ಕಾರದ ಮಂಜೂರಾತಿ ಅವಶ್ಯವಿರುತ್ತದೆ. ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ (ಪಿಆರ್) 114 ಡಬ್ಲ್ಯೂಬಿಎ 2009, ಬೆಂಗಳೂರು,**
**ದಿನಾಂಕ: 25ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಾದರಿ ಕರ್ನಾಟಕ ಸಾರ್ವಜನಿಕ ಆರೋಗ್ಯ ಕಾಯ್ದೆಯ ಕರಡನ್ನು ತಯಾರಿಸಿರುವ ಸಂಬಂಧದಲ್ಲಿ, ದಿ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ, ನಾಗರಬಾವಿ, ಬೆಂಗಳೂರು, ಇವರಿಗೆ ರೂ 1,47,600–00 (ರೂ. ಒಂದು ಲಕ್ಷ ನಲವತ್ತೇಳು ಸಾವಿರ ಆರುನೂರು ಮಾತ್ರ)ಗಳು + ಅನ್ವಯಿಸುವ ದರದಲ್ಲಿ ಸೇವಾ ತೆರಿಗೆ ಸೇರಿದಂತೆ 2ನೇ ಹಾಗೂ ಕೊನೆಯ ಕಂತಿನ ಶುಲ್ಕವನ್ನು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಪಾವತಿಸಲು, ಸರ್ಕಾರವು ಮಂಜೂರಾತಿ ನೀಡಿದೆ.

ಈ ಮೊತ್ತವನ್ನು ದಿ ನ್ಯಾಷನಲ್ ಲಾ ಸ್ಕೂಲ್ ನಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ ಇವರಿಂದ ಬಿಲ್ ಪಡೆದು ಡಿಸಿ. ಬಿಲ್ ಮೂಲಕ ಖಜಾನೆಯಿಂದ ಹಣ ಸೆಳೆದು ಸದರಿ ಸಂಸ್ಥೆಗೆ ವಿತರಿಸತಕ್ಕದ್ದು.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ "2210–06–800–0–81 (015) ಪೂರಕ ವೆಚ್ಚಗಳು" ಅಡಿಯಲ್ಲಿ 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2020

**ಎಂ. ಶಶಿಧರ್**

ಸರ್ಕಾರದ ಉಪ ಕಾರ್ಯದರ್ಶಿ ಕೆಹೆಚ್ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಆರ್. ಮಹದೇವಶೆಟ್ಟಿ, ಪ್ರ.ದ.ಸ., 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ದೋಷಾರೋಪಣೆ ಪತ್ರ ದಿನಾಂಕ :24.,2.2005.
2) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ರವರ ಪತ್ರ ಸಂಖ್ಯೆ :ಸಿಬ್ಬಂದಿ –4/ಡಿಇ–48/2004–05 ದಿನಾಂಕ :30.3.2005.
3) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಆಡಳಿತ)ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ :ಅಪೀಲು /.10/2005–2006 ದಿನಾಂಕ :19.1.2007.
4) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ :2.1.2008
5) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ :ಅಪೀಲು (2) 116/2007–2008 ದಿನಾಂಕ :25.7.2008 ಮತ್ತು 19.2.2009.
6) ಕರ್ನಾಟಕ ಲೋಕಸೇವಾ ಆಯೋಗ ರವರ ಪತ್ರ ಸಂಖ್ಯೆ ಪಿಎಸ್‌ಸಿ 76/ಸಿಎನ್ಎಸ್/09 ದಿನಾಂಕ :21.7.2009

**ಪ್ರಸ್ತಾವನೆ:**

ಶ್ರೀ ಆರ್. ಮಹದೇವಶೆಟ್ಟಿ , ಪ್ರ.ದ.ಸ. 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ನಗದು ಗುಮಾಸ್ತರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕೆ.ಎಸ್.ಆರ್.ಪಿ. ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ ಇದರ ಸದಸ್ಯರ ಸಾಲ ಮರುಪಾವತಿ ಹಣವನ್ನು ಸಕಾಲಕ್ಕೆ ಬ್ಯಾಂಕಿಗೆ ಜಮಾ ಮಾಡದೆ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿದ ಹಿನ್ನೆಲೆಯಲ್ಲಿ, ಸದರಿಯವರ ವಿರುದ್ಧ ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳು, 1957ರ ನಿಯಮ 12ರಡಿ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ದೋಷಾರೋಪಣೆ ಪತ್ರವನ್ನು ಹೊರಡಿಸಲಾಗಿರುತ್ತದೆ.

ಸದರಿ ದೋಷಾರೋಪಣೆಗಳಿಗೆ ಶ್ರೀ ಆರ್. ಮಹದೇವ ಶೆಟ್ಟಿ, ಪ್ರ.ದ.ಸ. ರವರು ಸಲ್ಲಿಸಿದ ಲಿಖಿತ ವಿವರಣೆಯನ್ನು ಒಪ್ಪದೆ ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸದರಿಯವರು ಪತ್ತಿನ ಸಹಕಾರ ಸಂಘ ನಿಯಮಿತ, ಕೋರಮಂಗಲ, ಬೆಂಗಳೂರು ಇಲ್ಲಿಗೆ ಮರುಪಾವತಿಸಬೇಕಾದ ಸಾಲದ ಹಣವನ್ನು ಸಕಾಲಕ್ಕೆ ಸಂಬಂಧಪಟ್ಟ ಬ್ಯಾಂಕ್‌ಗೆ ಜಮಾ ಮಾಡದೇ ಇದ್ದ ಕಾರಣ ಸಂಘದಿಂದ ಸಾಲ ಪಡೆದ ಸಂಬಂಧಿಸಿದ ಸದಸ್ಯರಿಗೆ ಹೊರೆಯಾದ ಹೆಚ್ಚಿನ ಬಡ್ಡಿ ಹಣ ರೂ. 4,056–00 (ರೂಪಾಯಿ ನಾಲ್ಕು ಸಾವಿರದ ಐವತ್ತಾರು ಮಾತ್ರ) ಗಳನ್ನು ಅವರ ಸಂಬಳದಿಂದ ಕಡಿತಗೊಳಿಸಲಾಗುವುದು ಹಾಗೂ ಸದರಿಯವರ ವಾರ್ಷಿಕ ಮುಂಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನಕ್ಕೆ ಧಕ್ಕೆಯಾಗದಂತೆ ಮುಂದೂಡಿ ದಂಡನೆ ವಿಧಿಸಿರುವರು.

ಸದರಿ ದಂಡನಾ ಆದೇಶದ ವಿರುದ್ಧ ಆಪಾದಿತರು ಮೇಲ್ಮನವಿಯನ್ನು ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಬೆಂಗಳೂರು ರವರಿಗೆ ಸಲ್ಲಿಸಿರುತ್ತಾರೆ. ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿರುತ್ತದೆ. ಆದ್ದರಿಂದ ಆಪಾದಿತರು ಈ ಎರಡು ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಮೇಲೆ ಓದಲಾದ (4)ರಲ್ಲಿ ಸಲ್ಲಿಸಿರುತ್ತಾರೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಶಿಸ್ತು ಪ್ರಾಧಿಕಾರವು ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಪರಿಷ್ಕರಿಸಲು ನಿರ್ಣಯಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (6)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 20 ಪೊಸಿಲಿ 2009, ಬೆಂಗಳೂರು, ದಿನಾಂಕ: 22ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ) ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಮಹದೇವಶೆಟ್ಟಿ, ಪ್ರಥಮ ದರ್ಜೆ ಸಹಾಯಕ, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಮುಂದೂಡುವ ದಂಡನೆಯನ್ನು ರದ್ದುಗೊಳಿಸಿ ಇವರ ವೇತನದಿಂದ ಕಟಾಯಿಸಿರುವ ಬಡ್ತಿ ಮೊತ್ತ ರೂ. 4,056/–ನ್ನು ದಂಡನೆ ಎಂದು ಪರಿಗಣಿಸದೇ ಇರಲು ಆದೇಶಿಸಿದೆ. ಸದರಿಯವರಿಗೆ ಕೆ.ಸಿ.ಎಸ್ (ಸಿ.ಸಿ.ಎ) ನಿಯಮ 8(2)ರನ್ವಯ "ವಾಗ್ದಂಡನೆ" ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2059

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಾರ್ಮಿಕ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲಾದಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಅಗತ್ಯವಿರುವ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ :ಕಾಇ 76 ಇಟಿಐ 2001 ದಿನಾಂಕ :30/1/2003

2) ಉದ್ಯೋಗ ಮತ್ತು ತರಬೇತಿ ಇಲಾಖೆ ರವರ ಪತ್ರ ಸಂಖ್ಯೆ :ಉತನಿ/ತರಬೇತಿ/ಯೋ02/ವಿವ–35/2002–03 ದಿನಾಂಕ: 5.10.2005 ಮತ್ತು 17.12.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲಾದಲ್ಲಿನ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಈ ಕೆಳಗಿನ ಹುದ್ದೆಗಳನ್ನು ಬಡ್ತಿ ಮೂಲಕ ಅಥವಾ ವರ್ಗಾವಣೆ ಮೂಲಕ ಭರ್ತಿ ಮಾಡಲು ಮಂಜೂರಾತಿ ನೀಡಲಾಗಿತ್ತು.

| | | |
|---|---|---|
| 1) | ಪ್ರಾಚಾರ್ಯರು ದರ್ಜೆ–2 | – 1 |
| 2) | ತರಬೇತಿ ಅಧಿಕಾರಿ | – 1 |
| 3) | ಕಿರಿಯ ತರಬೇತಿ ಅಧಿಕಾರಿ | – 5 |
| | ಒಟ್ಟು | – 7 |

ಮೇಲೆ (2)ರಲ್ಲಿ ಓದಲಾದ ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರಗಳಲ್ಲಿ ಪ್ರಸ್ತುತ ಇಲಾಖೆಯಲ್ಲಿ ಬಹಳ ಹುದ್ದೆಗಳು ಖಾಲಿ ಇರುವ ಕಾರಣ ಬಡ್ತಿ ಅಥವಾ ಮರುಹೊಂದಾಣಿಕೆ ಮೂಲಕ ಹುದ್ದೆಗಳನ್ನು ತುಂಬಲು ಕಷ್ಟಕರವಾಗಿದ್ದು ಆರ್ಥಿಕ ಮಿತವ್ಯಯ ನೀತಿಯನ್ನು ಸಡಿಲಿಸಿ, ಸದರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಈ ಕೆಳಗಿನ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| ಕ್ರ.ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಾಚಾರ್ಯರು (2ನೇ ದರ್ಜೆ) | 1 |
| 2 | ತರಬೇತಿ ಅಧಿಕಾರಿ | 1 |
| 3 | ಕಿರಿಯ ತರಬೇತಿ ಅಧಿಕಾರಿ (9 ಘಟಕಗಳಿಗೆ ತಲಾ ಒಬ್ಬರಂತೆ ಡ್ರಾಯಿಂಗ್ ಹಾಗೂ ಕಾರ್ಯಗಾರ ಗಣಿತಕ್ಕೆ ತಲಾ ಒಬ್ಬರಂತೆ) | 11 |
| 4 | ಕಛೇರಿ ಅಧೀಕ್ಷಕರು | 1 |
| 5 | ಪ್ರಥಮ ದರ್ಜೆ ಸಹಾಯಕರು | 2 |
| 6 | ಉಗ್ರಾಣ ಪಾಲಕ (ಪ್ರ.ದ.ಸ) | 1 |
| 7 | ದ್ವಿತೀಯ ದರ್ಜೆ ಸಹಾಯಕರು | 2 |
| 8 | ಬೆರಳಚ್ಚುಗಾರರು | 1 |

| | | |
|---|---|---|
| 9 | ಕಾರ್ಯಗಾರ ಸಹಾಯಕ | 4 |
| 10 | ಗ್ರೂಪ್–ಡಿ | 3 |
| ಒಟ್ಟು | | 27 |

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 279 ಇಟಐ 2007, ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2009**

2002–03ನೇ ಸಾಲಿನಲ್ಲಿ ಮಂಜೂರಾದ ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲಾದಲ್ಲಿನ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಗ್ರೂಪ್–ಡಿ ಹುದ್ದೆಗಳನ್ನು ಬಾಹ್ಯ ಮೂಲಗಳಿಂದ ಭರ್ತಿ ಮಾಡಬೇಕೆಂಬ ಷರತ್ತಿಗೊಳಪಟ್ಟು, ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಾಚಾರ್ಯರು ದರ್ಜೆ–2 | 01 |
| 2 | ತರಬೇತಿ ಅಧಿಕಾರಿ | 01 |
| 3 | ಕಿರಿಯ ತರಬೇತಿ ಅಧಿಕಾರಿ | 10 |
| 4 | ಕಛೇರಿ ಅಧೀಕ್ಷಕರು | 01 |
| 5 | ಪ್ರಥಮ ದರ್ಜೆ ಸಹಾಯಕರು | 01 |
| 6 | ದ್ವಿತೀಯ ದರ್ಜೆ ಸಹಾಯಕರು | 01 |
| 7 | ಕಾರ್ಯಗಾರ ಸಹಾಯಕ | 05 |
| 8 | ಗ್ರೂಪ್–ಡಿ | 02 |
| ಒಟ್ಟು | | 22 |

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಯೋಇ 3 ಜಶ 2009 ದಿನಾಂಕ:3.3.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 176 ವೆಚ್ಚ–9/09 ದಿನಾಂಕ:18.8.2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2102

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ವಿಷಯ :** ಹುದ್ದೆಗಳ ಸ್ಥಳಾಂತರದ ಬಗ್ಗೆ.

**ಓದಲಾಗಿದೆ :** ಉದ್ಯೋಗ ಮತ್ತು ತರಬೇತಿ ಇಲಾಖೆ ರವರ ಪತ್ರ ಸಂಖ್ಯೆ :ಉತನಿ/ಉನಿ(ಉ)/ವಿವ–1/2009–10 ದಿನಾಂಕ : 30.7.2009.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಬಿಜಾಪುರ ಗುಲ್ಬರ್ಗಾ ಮತ್ತು ಹುಬ್ಬಳ್ಳಿಗಳಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರಗಳನ್ನು ಪ್ರಾರಂಭಿಸಲು ಸಹಾಯಕವಾಗುವಂತೆ ವಿಶ್ವವಿದ್ಯಾಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಧಾರವಾಡ ಇಲ್ಲಿನ ಗ್ರೂಪ್–ಎ ವೃಂದದ ಸಹಾಯಕ ನಿರ್ದೇಶಕರ ಹುದ್ದೆಯನ್ನು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ ಇಲ್ಲಿಗೆ ಸ್ಥಳಾಂತರಿಸಲು ಮತ್ತು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ ಇಲ್ಲಿನ ಗೂಪ್–ಬಿ ವೃಂದದ ಉದ್ಯೋಗಾಧಿಕಾರಿ ಹುದ್ದೆಯನ್ನು ವಿಶ್ವವಿದ್ಯಾಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಧಾರವಾಡ ಇಲ್ಲಿಗೆ ಸ್ಥಳಾಂತರಿಸಲು ಆಡಳಿತಾತ್ಮಕ ಆದೇಶ ನೀಡುವಂತೆ ಕೋರುತ್ತಾ, ಕ್ರಮವಾಗಿ ಹುಬ್ಬಳ್ಳಿ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರದ ಡಿ.ಡಿ.ಓ ಕಾರ್ಯಗಳನ್ನು ಸಹಾಯಕ ನಿರ್ದೇಶಕರಿಗೆ ಮತ್ತು ಧಾರವಾಡ ವಿಶ್ವವಿದ್ಯಾಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರದ ಡಿ.ಡಿ.ಓ. ಕಾರ್ಯಗಳನ್ನು ಉದ್ಯೋಗಾಧಿಕಾರಿಗಳಿಗೆ ವಹಿಸಿ ಆದೇಶ ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 36 ಇಟಿಎಕ್ಸ್ 2009, ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2009**

ವಿಶ್ವವಿದ್ಯಾಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಧಾರವಾಡ ಇಲ್ಲಿನ ಗ್ರೂಪ್–ಎ ವೃಂದದ ಸಹಾಯಕ ನಿರ್ದೇಶಕರ ಹುದ್ದೆಯನ್ನು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ ಇಲ್ಲಿಗೆ ಸ್ಥಳಾಂತರಿಸಲು ಮತ್ತು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ ಇಲ್ಲಿನ ಗ್ರೂಪ್–ಬಿ ವೃಂದದ ಉದ್ಯೋಗಾಧಿಕಾರಿ ಹುದ್ದೆಯನ್ನು ವಿಶ್ವವಿದ್ಯಾಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಧಾರವಾಡ ಇಲ್ಲಿಗೆ ಸ್ಥಳಾಂತರಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಅಲ್ಲದೇ ಕ್ರಮವಾಗಿ ಹುಬ್ಬಳ್ಳಿ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರದ ಡಿ.ಡಿ.ಓ. ಕಾರ್ಯಗಳನ್ನು ಸಹಾಯಕ ನಿರ್ದೇಶಕರಿಗೆ ಮತ್ತು ಧಾರವಾಡ ವಿಶ್ವವಿದ್ಯಾಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರದ ಡಿ.ಡಿ.ಓ. ಕಾರ್ಯಗಳನ್ನು ಉದ್ಯೋಗಾಧಿಕಾರಿಗಳಿಗೆ ವಹಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2103

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ರವರ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

**ಸರ್ಕಾರಿ ಆದೇಶ ಸಂ: ಸಿಆಸುಇ 68 ಕೆಇವಿ 2008, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2009**

ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ, ಬೆಳಗಾಂ ಜಿಲ್ಲೆ ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಪೊಲೀಸರು ದಾಖಲಿಸಿರುವ ದಾಳಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ಸಂ:ಸಿಆಸುಇ 68 ಕೆಇವಿ 08 ದಿ:28–10–08 ರಲ್ಲಿ ಇವರನ್ನು ದಿ:19.9.08 ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ.

ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಅವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಸರ್ಕಾರವು ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2104

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಷ್ಟ್ರೀಯ ನದಿ ಸಂರಕ್ಷಣಾ ಯೋಜನೆಯಡಿಯಲ್ಲಿ ನದಿಗೆ ಹರಿಯುವ ಮಲೀನ ನೀರನ್ನು ವಿಭಜಿಸುವ ಕಾಮಗಾರಿಗಳಡಿಯಲ್ಲಿ ಭದ್ರಾವತಿ ಮಲೀನ ನೀರು ಶುದ್ಧೀಕರಣ ಘಟಕ ಸ್ಥಾಪನೆಯ ಪರಿಷ್ಕೃತ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1) ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ ಬೆಂಗಳೂರು ರವರ ಪತ್ರ ಸಂಖ್ಯೆ :ಕಜಮಂ :ಮುಅ:ಡಿಸಿಇ(ಸಿ) :ತಾಸ–5:ಸ.ಅ–3:3611:2008–09,ದಿನಾಂಕ :10.2.2009.
2) ದಿನಾಂಕ :13.3.2009ರಂದು ಪ್ರಧಾನ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಶಾಸ್ತ್ರ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು, ರಾಷ್ಟ್ರೀಯ ನದಿ ಸಂಕ್ಷಾರಣಾ ಯೋಜನೆಯಡಿ ನದಿಗೆ ಹರಿಯುವ ಮಲೀನ ನೀರನ್ನು ವಿಭಜಿಸುವ ಮತ್ತು ಒಳಚರಂಡಿ ಮಲೀನ ನೀರು ಶುದ್ಧೀಕರಣ ಘಟಕ ಕಲ್ಪಿಸುವ ಯೋಜನೆಗಳ ಅನುಮೋದನೆಯನ್ನು ಎಂಟು ಪಟ್ಟಣಗಳಿಗೆ ನೀಡಲಾಗಿದ್ದು. ಅವುಗಳ ಪೈಕಿ ಭದ್ರಾವತಿ ಪಟ್ಟಣದ ಐ & ಡಿ (ನದಿಗೆ ಹರಿಯುವ ಮಲೀನ ನೀರನ್ನು

ವಿಭಜಿಸುವ ಕಾಮಗಾರಿ)ಗೆ ರೂ. 190.95 ಲಕ್ಷಗಳಿಗೆ ಕೇಂದ್ರ ಸರ್ಕಾರದಿಂದ ಅನುಮೋದನೆ ದೊರೆತ್ತಿದ್ದು. ಸದರಿ ಮೊತ್ತದಲ್ಲಿ ರೂ. 87.83 ಲಕ್ಷಗಳನ್ನು ಕೇಂದ್ರ ಸರ್ಕಾರದಿಂದ ಹಾಗೂ ರೂ. 103.12 ಲಕ್ಷಗಳನ್ನು ರಾಜ್ಯ ಸರ್ಕಾರದಿಂದ ಭರಿಸಲು ಸೂಚಿಸಲಾಗಿತ್ತೆಂದು ತಿಳಿಸಿರುತ್ತಾರೆ. ಇದಲ್ಲದೆ ಸದರಿ ಯೋಜನೆಯ ಕಾಮಗಾರಿಗಳನ್ನು ಕೈಗೊಳ್ಳುವಾಗ ಸ್ಕ್ರೀನ್ ಮತ್ತು ಗ್ರಿಟ್ ಚೇಂಬರ್‌ನ ಅಗೆತ, ಆರ್.ಸಿ.ಸಿ. ಕೊಳವೆ ಬದಲು ಡಿ.ಐ.ಏರು ಕೊಳವೆ ಮಾರ್ಗ ಮತ್ತು 2 ಸಂಖ್ಯೆ ಹೆಚ್ಚುವರಿ ವೆಟ್‌ವೆಲ್‌ಗಳನ್ನು ನಿರ್ಮಾಣ ಮಾಡುವಾಗ ಸ್ಥಳಕ್ಕೆ ಅನುಗುಣವಾಗಿ ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ. ಈ ಹೆಚ್ಚುವರಿ ಕಾಮಗಾರಿಗಳಿಂದ ಯೋಜನೆಯ ಅಂದಾಜು ಮೊತ್ತವು ಮೂಲ ಅಂದಾಜು ಮೊತ್ತಕ್ಕಿಂತ ರೂ. 84.05 ಲಕ್ಷಗಳಿಗೆ ಹೆಚ್ಚುವರಿಯಾಗಿರುತ್ತದೆ. ಯೋಜನೆಯ ಪರಿಷ್ಕೃತ ಅಂದಾಜು ರೂ. 275.00 ಲಕ್ಷಗಳಿಗೆ ಅನುಮೋದನೆ ಮತ್ತು ಹೆಚ್ಚುವರಿ ಮೊತ್ತ ಬಿಡುಗಡೆಗಾಗಿ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆರವರನ್ನು ಕೋರಲಾಗಿತ್ತೆಂದು, ಆದರೆ ಹೆಚ್ಚುವರಿ ಮೊತ್ತವಾದ ರೂ. 84.05 ಲಕ್ಷಗಳನ್ನು ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆಯಿಂದ ಬಿಡುಗಡೆ ಮಾಡಲು ಸಾಧ್ಯವಿಲ್ಲವೆಂದು ಭದ್ರಾವತಿ ಐ&ಡಿ ಕಾಮಗಾರಿಯ ಉಪಯುಕ್ತತೆಯನ್ನು ಪರಿಗಣಿಸಿ ಸದರಿ ಮೊತ್ತವನ್ನು ನಗರಾಭಿವೃದ್ಧಿ ಇಲಾಖೆಯಿಂದ ಪಡೆದುಕೊಳ್ಳಲು ತಿಳಿಸಿರುವುದಾಗಿ ವರದಿ ಮಾಡಿ ಹೆಚ್ಚುವರಿ ಮೊತ್ತ ರೂ. 84.05 ಲಕ್ಷಗಳನ್ನು ಬಿಡುಗಡೆ ಮಾಡಲು ಹಾಗೂ ಪರಿಷ್ಕೃತ ಅಂದಾಜು ಮೊತ್ತಕ್ಕೆ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಸಭೆಯಲ್ಲಿ ಭದ್ರಾವತಿ ಐ&ಡಿ ಕಾಮಗಾರಿಯ ಉಪಯುಕ್ತತೆಯನ್ನು ಪರಿಗಣಿಸಿ ಯೋಜನೆಯ ಪರಿಷ್ಕೃತ ಅಂದಾಜು ಪಟ್ಟಿಯ ಹೆಚ್ಚುವರಿ ಮೊತ್ತವಾದ ರೂ. 84.05 ಲಕ್ಷಗಳನ್ನು ನಗರಾಭಿವೃದ್ಧಿ ಇಲಾಖೆಯು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲು ನಿರ್ಣಯಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಯೋಜನೆಯ ಹೆಚ್ಚುವರಿ ಮೊತ್ತವನ್ನು ನಗರಾಭಿವೃದ್ಧಿ ಇಲಾಖೆಯ ಎಸ್.ಎಫ್.ಸಿ ಅನುದಾನದಲ್ಲಿ ''Global Provision'' ರಡಿಯಲ್ಲಿ "ಸ್ಥಳೀಯ ಸಂಸ್ಥೆಗಳ ಹಂಚಿಕೆ/ಯೋಜನೆಗಳ ಹಂಚಿಕೆಯಡಿಯಲ್ಲಿ" ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ನಿಗಧಿ ಮಾಡಿರುವ ಮೊತ್ತದಲ್ಲಿ ಬಿಡುಗಡೆ ಮಾಡಲು ತೀರ್ಮನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 113 ಯುಎಂಎಸ್ 2008, ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಷ್ಟ್ರೀಯ ನದಿ ಸಂರಕ್ಷಣಾ ಯೋಜನೆಯಡಿಯಲ್ಲಿ ನದಿಗೆ ಹರಿಯುವ ಮಲೀನ ನೀರನ್ನು ವಿಭಜಿಸುವ ಕಾಮಗಾರಿಗಳಡಿಯಲ್ಲಿ ಭದ್ರಾವತಿ ಮಲೀನ ಶುದ್ಧೀಕರಣ ಘಟಕ ಸ್ಥಾಪನೆಯ ಪರಿಷ್ಕೃತ ಅಂದಾಜು ರೂ. 275.00 ಲಕ್ಷಗಳಲ್ಲಿ ಈಗಾಗಲೇ ಮಂಜೂರಾಗಿರುವ ರೂ. 190.95 ಲಕ್ಷಗಳನ್ನು ಹೊರತುಪಡಿಸಿ ಹೆಚ್ಚುವರಿಯಾಗಿ ಅವಶ್ಯವಿರುವ ಮೊತ್ತ ರೂ. 84.05 ಲಕ್ಷಗಳನ್ನು (ಎಂಬತ್ತು ನಾಲ್ಕು ಲಕ್ಷ ಮತ್ತು ಐದು ಸಾವಿರ ರೂ.ಗಳು ಮಾತ್ರ) ನಗರಾಭಿವೃದ್ಧಿ ಇಲಾಖೆಯ ಎಸ್.,ಎಫ್.ಸಿ ಅನುದಾನದಲ್ಲಿ ''Global Provision'' ರಡಿಯಲ್ಲಿ "ಸ್ಥಳೀಯ ಸಂಸ್ಥೆಗಳ ಹಂಚಿಕೆ/ಯೋಜನೆಗಳ ಹಂಚಿಕೆಯಡಿ" ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ನಿಗಧಿ ಮಾಡಿರುವ ಮೊತ್ತದಲ್ಲಿ ಭರಿಸಲು ಮತ್ತು ಯೋಜನೆಯ ಪರಿಷ್ಕೃತ ಅಂದಾಜು ಮೊತ್ತ ರೂ. 275.00 ಲಕ್ಷಗಳಿಗೆ (ರೂ. ಎರಡು ನೂರ ಎಪ್ಪತ್ತೈದು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
2) ಸದರಿ ಯೋಜನೆಗೆ ಇನ್ನು ಮುಂದೆ ಯಾವುದೇ ರೀತಿಯ ಹೆಚ್ಚಿನ ಮೊತ್ತವನ್ನು ಬಿಡುಗಡೆ ಮಾಡಲಾಗುವುದಿಲ್ಲ.
3) ಕಾಮಗಾರಿಗಳನ್ನು ಎಲ್ಲಾ ರೀತಿಯಿಂದಲೂ ಪೂರ್ಣಗೊಳಿಸಿ ಕೇಂದ್ರ ಸರ್ಕಾರದ ಸೂಚನೆಯಂತೆ ಸ್ಥಳೀಯ ಸಂಸ್ಥೆಗೆ ಸೂಕ್ತ ನಿರ್ವಹಣೆಗಾಗಿ ವಹಿಸತಕ್ಕದ್ದು.
4) ಯೋಜನೆಯ ಹೆಚ್ಚುವರಿ ಮೊತ್ತವಾದ ರೂ. 84.05 ಲಕ್ಷಗಳನ್ನು ನಗರಾಭಿವೃದ್ಧಿ ಇಲಾಖೆಯ ಎಸ್.ಎಫ್.ಸಿ. ಅನುದಾನದಲ್ಲಿ ''Global Provision'' ರಡಿಯಲ್ಲಿ "ಸ್ಥಳೀಯ ಸಂಸ್ಥೆಗಳ ಹಂಚಿಕೆ/ಯೋಜನೆಗಳ ಹಂಚಿಕೆಯಡಿ" ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ನಿಗಧಿ ಮಾಡಿರುವ ಮೊತ್ತದಲ್ಲಿ ಸೇರಿಸಿ ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಜರೂರಾಗಿ ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2105

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** 2009–10ನೇ ಸಾಲಿನಲ್ಲಿ ಬರ ಪೀಡಿತ ಮತ್ತು ಮಳೆ ಕೊರತೆ ಪ್ರದೇಶಗಳಲ್ಲಿ ಡೀಜಲ್ ಪಂಪ್‌ಸೆಟ್‌ಗಳಿಂದ ಪೂರಕ ನೀರಾವರಿ ಸೌಲಭ್ಯ ಒದಗಿಸಲು ಡೀಜಲ್‌ಗೆ ಸಹಾಯಧನ ನೀಡುವ ಸಲುವಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ :31–3/2009–DM ದಿನಾಂಕ :3.8.2009.

2) ಕೃಷಿ ಆಯುಕ್ತರು, ಕೃಷಿ ಇಲಾಖೆ, ಇವರ ಪತ್ರ ಸಂಖ್ಯೆ :ಉಕೃನಿ/ರಾಭೂಬಮಂ/ಡೀಜಲ್–ಸಬ್ಸಿಡಿ/2009–10 ದಿ :10.8.09.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ರಾಜ್ಯದ 20 ಜಿಲ್ಲೆಗಳ 86 ತಾಲ್ಲೂಕುಗಳನ್ನು ಬರ ಪೀಡಿತ ತಾಲ್ಲೂಕುಗಳೆಂದು ಘೋಷಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೇಂದ್ರ ಸರ್ಕಾರವು 2009 ಮುಂಗಾರು ಮಳೆಯ ಅಭಾವದಿಂದ ಬರಪೀಡಿತ ಪ್ರದೇಶ ಮತ್ತು ಮಳೆ ಕೊರತೆಯಿಂದ ಹಾನಿಗೀಡಾದ ಪ್ರದೇಶಗಳ ಬೆಳೆದು ನಿಂತ ಬೆಳೆಗಳಿಗೆ ಡೀಜಲ್ ಪಂಪ್ ಸೆಟ್‌ಗಳ ಮೂಲಕ ಪೂರಕ ನೀರಾವರಿ ಸೌಲಭ್ಯ ಒದಗಿಸಲು ಡೀಜಲ್ ವೆಚ್ಚವನ್ನು ಸಬ್ಸಿಡಿ ಕಾರ್ಯಕ್ರಮವನ್ನು ಜಾರಿಗೆ ತಂದಿದೆ ಈ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ 50:50 ಆಧಾರದ ಮೇಲೆ ಅನುಷ್ಠಾನಗೊಳಿಸಬೇಕಾಗುತ್ತದೆ. ಹಾನಿಗೀಡಾದ ಬೆಳಗಳನ್ನು ರಕ್ಷಿಸಿಕೊಳ್ಳಲು ಬರಪೀಡಿತ ಪ್ರದೇಶದ ರೈತರು ಡೀಜಲ್ ಪಂಪ್‌ಸೆಟ್‌ಗಳಿಂದ ಬೆಳೆದು ನಿಂತ ಬೆಳೆಗಳಿಗೆ ನೀರಾವರಿ ಮಾಡಿಕೊಳ್ಳಲು ಅನುಕೂಲವಾಗುವಂತೆ ರಿಯಾಯ್ತಿದರದಲ್ಲಿ ಗರಿಷ್ಠ ರೂ. 1000.00 ದಂತೆ ಪ್ರತಿ ರೈತರಿಗೆ ಗರಿಷ್ಠ 2 ಹೆಕ್ಟೇರ್ ವರೆಗೆ ಸಹಾಯದನ ನೀಡಲು ಭಾರತ ಸರ್ಕಾರವು ಉದ್ದೇಶಿಸಿದೆ. ಇದರಲ್ಲಿ ಅರ್ಧ ಭಾಗವನ್ನು ರಾಜ್ಯ ಸರ್ಕಾರವು ಭರಿಸಬೇಕಾಗಿರುತ್ತದೆ. ಮೇಲೆ (2) ರಲ್ಲಿ ಓದಲಾದ ಕೃಷಿ ಆಯುಕ್ತರ ಪತ್ರದಲ್ಲಿ ಬರ ಪೀಡಿತ ಪ್ರದೇಶಗಳ ಬೆಳೆಗಳನ್ನು ರಕ್ಷಿಸಿಕೊಳ್ಳಲು ಮೂರು ಸಲ ಬೆಳೆಗಳಿಗೆ ನೀರುಣಿಸಿದರೆ ಮಳೆಯ ಕೊರತೆಯಿಂದ ಹಾನಿಗೀಡಾದ ಬೆಳೆಗಳನ್ನು ರಕ್ಷಿಸಿಕೊಳ್ಳಬಹುದು. ಮತ್ತು ರಾಜ್ಯದ 20 ಜಿಲ್ಲೆಗಳ 86 ತಾಲ್ಲೂಕುಗಳಲ್ಲಿ 30000 ಹೆಕ್ಟೇರ್ ಪ್ರದೇಶದ ಬೆಳೆಗಳಿಗೆ ಡೀಜಲ್ ಪಂಪ್ ಸೆಟ್ ಮೂಲಕ ನೀರುಣಿಸಲು ಪ್ರತಿ ಹೆಕ್ಟೇರ್ ಗೆ ರೂ. 1000 ದಂತೆ ಒಟ್ಟು ರೂ. 3ಕೋಟಿ ಅನುದಾನದ ಅವಶ್ಯಕತೆ ಇರುತ್ತದೆ ಎಂದು ತಿಳಿಸುತ್ತ ಈ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಇದರಲ್ಲಿ ಕೇಂದ್ರ ಸರ್ಕಾರವು ಶೇ. 50 ರಷ್ಟು ಮರುಪಾವತಿ ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 175 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009–10ನೇ ಸಾಲಿನಲ್ಲಿ ಬರಪೀಡಿತವೆಂದು ಘೋಷಿಸಿರುವ ರಾಜ್ಯದ 20 ಜಿಲ್ಲೆಗಳ 86 ತಾಲ್ಲೂಕುಗಳಲ್ಲಿ ಮಳೆ ಅಭಾವದಿಂದ ಹಾನಿಗೀಡಾಗಿರುವ ಬೆಳೆಗಳನ್ನು ರಕ್ಷಿಸಿಕೊಳ್ಳಲು ರೈತರು ಡೀಜಲ್ ಪಂಪ್‌ಸೆಟ್‌ಗಳಿಂದ ಬೆಳೆದು ನಿಂತ ಪೈರುಗಳಿಗೆ ನೀರಾವರಿ ಒದಗಿಸಲು ಡೀಜಲ್ ವೆಚ್ಚ ಭರಿಸಲು ಸಬ್ಸಿಡಿ ನೀಡುವ ಸಲುವಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಆಯುಕ್ತರು ಕೃಷಿ ಇಲಾಖೆ ಇವರಿಗೆ ರೂ. 300.00 ಲಕ್ಷ (ರೂ. ಮುನ್ನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜುರಾತಿ ನೀಡಲಾಗಿದೆ.

ಕೃಷಿ ಇಲಾಖೆಯು ಈ ಕಾರ್ಯಕ್ರಮದ ನಿಯಮಾನುಸಾರ ಕೇಂದ್ರ ಸರ್ಕಾರದ ಪಾಲು ಶೇ. 50 ರಷ್ಟು ಮೊತ್ತವನ್ನು ಕೇಂದ್ರ ಸರ್ಕಾರದಿಂದ ಹಿಂಪಡೆದು ಪ್ರಕೃತಿ ವಿಕೋಪ ಪರಿಹಾರ ಮೊತ್ತಕ್ಕೆ ಜಮಾ ಮಾಡುವಂತೆ ಆದೇಶಿಸಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ:ಆಇ 692 ವೆಚ್ಚ–7/2009 ದಿನಾಂಕ:22.8.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2106

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ರಾಜ್ಯದಿಂದ ಹೊರಗೆ, ಬೇರೆ ರಾಜ್ಯಗಳಿಗೆ ಸಾಧಾರಣ ಮರಳು ಸಾಗಾಣಿಕೆ ಮಾಡುವುದನ್ನು ನಿಷೇಧಿಸುವ ಕುರಿತು.

**ಓದಲಾಗಿದೆ :** ಸಂಖ್ಯೆ :ಗಭೂಇ :ಕಗಗು :ಸಾ. ಮರಳು :2009–10/1279 ದಿನಾಂಕ : 24.7.2009.

**ಪ್ರಸ್ತಾವನೆ:**

ಬೃಹತ್ ಬೆಂಗಳೂರು ಮಹಾನಗರದಲ್ಲಿ ಬಹಳಷ್ಟು ಕಟ್ಟಡ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಅವುಗಳಿಗಾಗಿ ಮರಳಿನ ಅವಶ್ಯಕತೆಯಿದ್ದು, ಬೆಂಗಳೂರು ನಗರಕ್ಕೆ ಮರಳು ಪೂರೈಸುವ ಜಿಲ್ಲೆಗಳಾದ ಕೋಲಾರ, ಚಿಕ್ಕಬಳ್ಳಾಪುರ, ರಾಮನಗರ,

ತುಮಕೂರು, ಮೈಸೂರು , ಮಂಡ್ಯ, ಚಾಮರಾಜನಗರ, ಹಾಸನ,. ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ನಗರ ಇಲ್ಲಿ ಮರಳು ತೆಗೆಯುವಿಕೆ/.ಸಾಗಾಣಿಕೆಗೆ ಸಾರ್ವಜನಿಕರಿಂದ ಹಾಗೂ ಪರಿಸರವಾದಿಗಳಿಂದ ತೀವ್ರ ಪ್ರತಿರೋಧವಿದ್ದ ಕಾರಣ ಕೆಲವು ಜಿಲ್ಲೆಗಳಲ್ಲಿ ಮರಳು ಗಣಿಗಾರಿಕೆ/ಸಾಗಾಣಿಕೆಗೆ ನಿಷೇಧ ಹೇರಲಾಗಿತ್ತು. ಏತನ್ಮಧ್ಯೆ ಲಾರಿ ಮಾಲೀಕರು ಮುಷ್ಕರದ ದಾರಿಯನ್ನು ಸಹ ಹಿಡಿದಿದ್ದರ ಹಿನ್ನೆಲೆಯಲ್ಲಿ ದಿನಾಂಕ:19.9.2008 ರಿಂದ ಜಾರಿಗೆ ಬರುವಂತೆ 6 ತಿಂಗಳ ಅವಧಿಗೆ ತಾತ್ಕಾಲಿಕ ಪರವಾನಿಗೆಗಳ ಪದ್ಧತಿಯನ್ನು ಜಾರಿಗೊಳಿಸಿ ಸರ್ಕಾರವು ಆದೇಶವನ್ನು ಹೊರಡಿಸಿದ್ದು, ಇದನ್ನು ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಲಾಗಿರುತ್ತದೆ.

ಅಲ್ಲದೆ, ರಾಜ್ಯದಲ್ಲಿನ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಕ್ಕಾಗಿ ಸಾದಾಮರಳಿನ ಕೊರತೆಯುಂಟಾಗಿದ್ದು, ಈ ಕೊರತೆಯನ್ನು ನೀಗಿಸಲು ಅಭಿವೃದ್ಧಿ ಕಾಮಗಾರಿಗಳಿಗೆ ಅಗತ್ಯವಿರುವ ಮರಳು ಬ್ಲಾಕ್‌ಗಳನ್ನು ಲೋಕೋಪಯೋಗಿ ಇಲಾಖೆಗೆ ಮೀಸಲಿರಿಸಲು ಕ್ರಮ ಕೈಗೊಳ್ಳುವಂತೆ ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ದಿನಾಂಕ:3.6.2009ರ ಆದೇಶ ಸಂಖ್ಯೆ:ಸಿಐ:142 ಎಂಎಂಎನ್. 2008ರಲ್ಲಿ ನಿರ್ದೇಶನ ನೀಡಲಾಗಿರುತ್ತದೆ.

ರಾಜ್ಯದ ಗಡಿ ಜಿಲ್ಲೆಗಳಾದ ದಕ್ಷಿಣಕನ್ನಡ, ಕೊಡಗು, ಮೈಸೂರು, ಚಾಮರಾಜನಗರ, ಬೆಳಗಾಂ, ಗುಲ್ಬರ್ಗಾ ಮತ್ತು ಇತರೆ ಜಿಲ್ಲೆಗಳಿಂದ ಹೊರ ರಾಜ್ಯಗಳಿಗೆ ಸಾದಾರಣ ಮರಳು ಸಾಗಾಣಿಕೆಯಾಗುತ್ತಿರುವುದು ಕಂಡು ಬಂದಿದ್ದು, ಈ ಬಗ್ಗೆ ಸಾರ್ವಜನಿಕರಿಂದಲೂ ಸಹ ದೂರುಗಳು ಬಂದಿರುತ್ತವೆಯೆಂದೂ, ಪ್ರಸ್ತುತ ರಾಜ್ಯದಲ್ಲಿ ನಡೆಯುತ್ತಿರುವ ಅಭಿವೃದ್ಧಿ ಕಾಮಗಾರಿಗಳಿಗೆ ಮರಳಿನ ಕೊರತೆಯಿದ್ದು, ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳ ರಾಜ್ಯಗಳು ಆಯಾ ರಾಜ್ಯಗಳಿಂದ ಬೇರೆ ರಾಜ್ಯಗಳಿಗೆ ಸಾದಾರಣ ಮರಳು ಸಾಗಾಣಿಕೆ ಮಾಡುವುದನ್ನು ನಿಷೇಧಿಸಿರುವಂತೆಯೇ ಕರ್ನಾಟಕ ರಾಜ್ಯದಿಂದಲೂ ಸಹ ಹೊರರಾಜ್ಯಗಳಿಗೆ ಸಾದಾರಣ ಮರಳು ಸಾಗಾಣಿಕೆ ಮಾಡುವುದನ್ನು ನಿಷೇಧಿಸಿ ಸೂಕ್ತ ಆದೇಶ ಹೊರಡಿಸುವಂತೆ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಇವರು ಮೇಲೆ ಓದಲಾದ ದಿನಾಂಕ:24.7.2009ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 250 ಎಂಎಂಎನ್ 2009, ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದಿಂದ ಹೊರರಾಜ್ಯಗಳಿಗೆ ಸಾದಾರಣ ಮರಳು ಸಾಗಾಣಿಕೆ ಮಾಡುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಷೇಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2109

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ(ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಆದೇಶ ಸಂಖ್ಯೆ:ಪಸಂಮೀ 237 ಪಸಸೇ 2009, ಬೆಂಗಳೂರು, ದಿನಾಂಕ:18ನೇ ಆಗಸ್ಟ್, 2009**

**ವಿಷಯ :** ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿದ ನಿವೃತ್ತ ಪಶುವೈದ್ಯಾಧಿಕಾರಿಗಳಿಗೆ ಪರಿಷ್ಕೃತ ವೇತನ ಶ್ರೇಣಿಯಂತೆ ಸಂಚಿತ ವೇತನ ನಿಗದಿಗೊಳಿಸುವಿಕೆ.

**ಓದಲಾಗಿದೆ :** 1) ಆದೇಶ ಸಂಖ್ಯೆ :ಪಸಂಮೀ 116 ಪಸಸೇ 2008, ದಿನಾಂಕ :11.7.2008.

2) ಆದೇಶ ಸಂಖ್ಯೆ :ಎಫ್‌ಡಿ 31 ಎಸ್‌ಆರ್‌ಪಿ 2007, (VII), ದಿನಾಂಕ :14.8.2008.

3) ಪತ್ರ ಸಂಖ್ಯೆ :ಆಪಸಂ/ಸಿಬ್ಬಂದಿ–2/ವಿವ–97/2008–09, ದಿನಾಂಕ :1.4.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ 100 ಪಶುವೈಧ್ಯಾಧಿಕಾರಿಗಳ ಹುದ್ದೆಗಳನ್ನು ನಿವೃತ್ತಿ ಹೊಂದಿದ ಪಶುವೈದ್ಯರನ್ನು ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ. 12,000 (ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ವೇತನ ಆಧಾರದ ಮೇಲೆ 2 ವರ್ಷಗಳ ಅವಧಿಗೆ ನೇಮಿಸಿಕೊಳ್ಳಲು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಯ ವೇತನ ಶ್ರೇಣಿ ರೂ. 12,000–22650 ಬದಲಾಗಿ ಸಂವಾದಿ ಪರಿಷ್ಕೃತ ವೇತನಶ್ರೇಣಿ ರೂ. 13,000–23850 ಆಗಿರತಕ್ಕದ್ದೆಂದು ನಿಗದಿಪಡಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಬೆಂಗಳೂರು ಇವರು ದಿನಾಂಕ:11.7.2008ರ ಆದೇಶದನ್ವಯ 100 ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲಾಗಿದ್ದು, ಅವರಿಗೆ ಸಂಚಿತ ವೇತನ ರೂ. 12,000–00 ನಿಗದಿಪಡಿಸಲಾಗಿದ್ದು, ಪರಿಷ್ಕೃತ ವೇತನಶ್ರೇಣಿಯಲ್ಲಿ ಪಶುವೈದ್ಯಾಧಿಕಾರಿಗಳ ವೇತನ ಶ್ರೇಣಿಯನ್ನು ರೂ. 13,000–23850ಕ್ಕೆ ನಿಗದಿಪಡಿಸಿರುವುದರಿಂದ ಗುತ್ತಿಗೆ

ಆಧಾರದ ಮೇಲೆ ನೇಮಕಗೊಂಡ ಅಧಿಕಾರಿಗಳಿಗೆ ನಿಗದಿಪಡಿಸಿರುವ ವೇತನ ರೂ. 12,000–00 ಗಳಿಂದ ಪರಿಷ್ಕೃತ ವೇತನ ಶ್ರೇಣಿಯಂತೆ ಕನಿಷ್ಠ ಹಂತ ರೂ. 13,000–00 ಗಳಿಗೆ ನಿಗದಿಪಡಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ ಹಾಗೂ ಪರಿಷ್ಕೃತ ವೇತನವನ್ನು ನಿಗದಿಗೊಳಿಸಿದಲ್ಲಿ ವಾರ್ಷಿಕ ಒಟ್ಟು. ರೂ. 12.00 ಲಕ್ಷಗಳ ಹೆಚ್ಚುವರಿ ವೆಚ್ಚವಾಗಲಿದ್ದು ಅದನ್ನು ಆಯಾಯ ಜಿಲ್ಲಾ ಪಂಚಾಯತ್ ಅನುದಾನದಲ್ಲಿ ವೇತನ ಶೀರ್ಷಿಕೆಯಡಿ ಭರಿಸಲಾಗುತ್ತದೆಂದು ತಿಳಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. 5ನೇ ರಾಜ್ಯವೇತನ ಆಯೋಗವು ಅಂತಿಮ ವರದಿಯಲ್ಲಿ ಮಾಡಿರುವ ಶಿಫಾರಸ್ಸುಗಳನ್ನು ಆರ್ಥಿಕ ಇಲಾಖೆಯು ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನಶ್ರೇಣಿಯನ್ನು ನೀಡುವ ಕುರಿತು ಆದೇಶಿಸಿದ್ದು, ಆ ಪ್ರಕಾರ ಪಶುವೈದ್ಯಾಧಿಕಾರಿ ಹುದ್ದೆಗೆ ಹಿಂದೆ ನಿಗದಿಪಡಿಸಿದ್ದ ಮೂಲವೇತನ ರೂ. 12000–22650ನ್ನು ಪರಿಷ್ಕರಿಸಿ ವೇತನ ಶ್ರೇಣಿ ರೂ. 13,000–23850 ಕ್ಕೆ ಹೆಚ್ಚಳ ಮಾಡಿದ್ದು, ಅದು ದಿನಾಂಕ:1.8.2008ರಿಂದ ಜಾರಿಗೆ ಬಂದಿರುತ್ತದೆ. ಗುತ್ತಿಗೆ ಆಧಾರದ ಮೇಲೇ ನೇಮಕಗೊಂಡಿರುವ ಪಶುವೈದ್ಯಾಧಿಕಾರಿಗಳಿಗೆ ಪರಿಷ್ಕೃತ ವೇತನ ಶ್ರೇಣಿ ಅನ್ವಯ ಸಂಚಿತ ವೇತನವನ್ನು ಪರಿಷ್ಕರಿಸಿದಲ್ಲಿ ತಗಲುವ ವೆಚ್ಚವನ್ನು ಆಯಾ ಜಿಲ್ಲಾ ಪಂಚಾಯತ್ ವೇತನ ಲೆಕ್ಕಶೀರ್ಷಿಕೆ ಅಡಿ ಭರಿಸುವುದಾಗಿ ಆಯುಕ್ತರು ತಿಳಿಸಿರುವ ಹಿನ್ನೆಲೆಯಲ್ಲಿ, ಅವರಿಗೆ ಸಂಚಿತ ವೇತನ ರೂ. 12,000–00 ನಿಗದಿಪಡಿಸಿರುವುದನ್ನು ರೂ. 13,000–00ಗಳಿಗೆ ಹೆಚ್ಚಿಸಲು ಸರ್ಕಾರ ತೀರ್ಮಾನಿಸಿದೆ .ಆದ್ದರಿಂದ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ:ಪಸಂಮಿ 116 ಪಸಸೇ 2008, ದಿನಾಂಕ:11.7.2008ರಲ್ಲಿ ಗುತ್ತಿಗೆ ಮೇಲೆ ನೇಮಕಗೊಳ್ಳುವ ಪಶುವೈದ್ಯಾಧಿಕಾರಿಗಳಿಗೆ ಸಂಚಿತ ವೇತನ ರೂ. 12,000–00 ಎಂದು ನಿಗದಿಪಡಿಸಿರುವುದನ್ನು ಪರಿಷ್ಕೃತ ವೇತನಶ್ರೇಣಿಯಂತೆ ಮಾರ್ಪಾಡು ಮಾಡಿ ಗುತ್ತಿಗೆ ವೇತನವನ್ನು ದಿನಾಂಕ:1.6.2009ರಿಂದ ಅನ್ವಯಿಸುವಂತೆ ಮಾಸಿಕ ರೂ. 13,000–00 (ಹದಿಮೂರು ಸಾವಿರ ರೂಪಾಯಿಗಳು ಮಾತ್ರ) ರಂತೆ ಮರುನಿಗದಿಪಡಿಸಲು ಮಂಜೂರಾತಿ ನೀಡಿದೆ.

ಮೂಲ ವೇತನ ಪರಿಷ್ಕರಣೆಯಿಂದ ತಗಲುವ ಹೆಚ್ಚುವರಿ ವೆಚ್ಚವನ್ನು ಗುತ್ತಿಗೆ ಪಶುವೈದ್ಯಾಧಿಕಾರಿಗಳು ಕಾರ್ಯನಿರ್ವಹಿಸುತ್ತಿರುವ ಆಯಾ ಜಿಲ್ಲಾ ಪಂಚಾಯತ್ ಅನುದಾನದಲ್ಲಿ ವೇತನಶೀರ್ಷಿಕೆ ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 192 ವೆ. 4 2008, ದಿನಾಂಕ:3.8.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2111

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಇಡಿ 210 ಡಿಸಿಇ 2008(1) ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಡಿ 58 ಡಿಸಿಇ 2009 ದಿನಾಂಕ:22.8.2009ರಲ್ಲಿ ನೇಮಕಾತಿಗಾಗಿ ಈ ಕೆಳಕಂಡ ಅಭ್ಯರ್ಥಿಯ ಹೆಸರು ಪರಿಗಣಿಸಿ ಹೊರಡಿಸಲಾಗಿದೆ. ಆದಾಗ್ಯೂ ಸರ್ಕಾರಿ ಆದೇಶ ಸಂಖ್ಯೆ:ಇಡಿ 210 ಡಿಸಿಇ 2008(1) ದಿನಾಂಕ:26.8.2009ರ ಆದೇಶದಲ್ಲಿ ಸದರಿ ಅಭ್ಯರ್ಥಿಯ ಹೆಸರು ಪುನರಾವೃತ್ತಿಯಾಗಿ ಈ ಕೆಳಕಂಡಂತೆ ನಮೂದಾಗಿರುತ್ತದೆ.

| ಕ್ರ.ಸಂ | KPSC ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil |
| 44 | 60 | ಸೌಮ್ಯ ಜಿ.ಆರ್. D/o ರುದ್ರಪ್ಪ ಜಿ, ಗುಬ್ಬಿಹಳ್ಳಿ, ಕಡೂರು ತಾ:ಬನ್ನೂರು ಪೋಸ್ಟ್, ಚಿಕ್ಕಮಗಳೂರು ಜಿಲ್ಲೆ–577135 | | | | M.Phil-Kuv Uni- 23.2.2008 |

ಪುನರಾವೃತ್ತಿಯಾಗಿರುವ ಮೇಲ್ಕಂಡ ಅಭ್ಯರ್ಥಿಯ ಹೆಸರನ್ನು ಮಾರ್ಪಡಿಸಿ ಈ ಕೆಳಕಂಡ ಅಭ್ಯರ್ಥಿಯ ಹೆಸರನ್ನು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರ.ಸಂ | KPSC ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil |
| 44 | 60 | ಸೌಮ್ಯ ಎಸ್.ಮೂರ್ತಿ, ಪಾರ್ವತಿ, 1216, 1ನೇ ಮುಖ್ಯರಸ್ತೆ, 1ನೇ ಕ್ರಾಸ್, ವಿಜಯನಗರ, ಬೆಂಗಳೂರು–560040 | | | | M.Phil-Bharathi dasan Uni-DIS-Dec 2007 |

ಮೇಲ್ಕಂಡ ನೇಮಕಾತಿಯ ಷರತ್ತುಗಳು ಈಗಾಗಲೇ ಹೊರಡಿಸಲಾಗಿರುವ ಷರತ್ತುಗಳು ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2112

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕರ ಹುದ್ದೆಯ ನೇಮಕಾತಿ ಬಗ್ಗೆ.

**ಓದಲಾಗಿದೆ :** 1) ಕರ್ನಾಟಕ ಉಚ್ಚನ್ಯಾಯಾಲಯದ ರಿಟ್ ಅಪೀಲು ಸಂಖ್ಯೆ :2376/2007/ S-RES ತೀರ್ಪಿನ ದಿನಾಂಕ :9.6.2009

2) ದಿ :25.8.2009ರಂದು ನಡೆದ ಸಂಸ್ಥೆಯ ಆಡಳಿತ ಮಂಡಳಿಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕರ ಹುದ್ದೆಯ ನೇಮಕಾತಿ ಬಗ್ಗೆ ಡಾ:ಶಿವಾನಂದರವರು ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅಪೀಲು ಸಂಖ್ಯೆ:2376/2007 ಇದರ ಮೇಲೆ ನ್ಯಾಯಾಲಯವು ಅಪೀಲನ್ನು ಅಂಗೀಕರಿಸಿ ಈ ಕೆಳಕಂಡಂತೆ ತೀರ್ಪನ್ನು ನೀಡಿರುತ್ತದೆ.

ii) The impugned order passed by the single Judge as well as the Notification issued as per Annexure A and B appointing the 3rd respondent as the Director of the Institute are hereby quashed.

iv) The Selection process till the stage of recommending the names of candidates is in order and therefore the 1st, 2nd, and 4th respondent shall proceed to consider the recommendation from aforesaid stage in accordance with law and in the light of the observations made above, within 5 weeks from the date of receipt of a copy of this Order.

ತೀರ್ಪಿನ ಭಾಗದ ಕಂಡಿಕೆ 2 ರಲ್ಲಿನ ಆದೇಶದನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 2 ಪಿಟಿಡಿ 2008 ದಿ:12.6.2009ರಲ್ಲಿ ಡಾ: ಎಂ.ಎಲ್. ಸಿದ್ದರಾಜು ಇವರನ್ನು ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕರ ಹುದ್ದೆಗೆ ನೇಮಕ ಮಾಡಿದ ಆದೇಶವನ್ನು ರದ್ದುಪಡಿಸಿದೆ.

ಮೇಲೆ ಓದಲಾದ ಕ್ರ.ಸಂ (2)ರಲ್ಲಿ ಸಂಸ್ಥೆಯ ಆಡಳಿತ ಮಂಡಳಿಯ ದಿ:25.8.2009ರಂದು ಸಭೆ ಸೇರಿ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲು ಸಂಖ್ಯೆ:2376/2007 ದಿ:9.6.2009ರಂದು ನೀಡಲಾಗಿದ್ದ ತೀರ್ಪಿನ ಆದೇಶದ ಕಂಡಿಕೆ 4ರಲ್ಲಿನ ನಿರ್ದೇಶದನ್ವಯ ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕರ ಹುದ್ದೆಗೆ ರಚಿಸಲಾಗಿದ್ದ ಆಯ್ಕೆ ಸಮಿತಿ ದಿ:24.1.2007ರ ನಡವಳಿಗಳನ್ನು ಪರಿಶೀಲಿಸಿದ್ದಲ್ಲದೆ ಸದರಿ ನಡವಳಿಗಳಲ್ಲಿ ಆಯ್ಕೆ ಸಮಿತಿಯು ಅರ್ಹತಾ ಕ್ರಮದಲ್ಲಿ ಶಿಫಾರಸ್ಸು ನೀಡಿರುವ ಡಾ:ಶಿವಾನಂದ, ಡಾ:ಎಂ.ಎಲ್. ಸಿದ್ದರಾಜು, ಡಾ: ಗೋವಿಂದರಾಜು, ಎಂ. ಇವರುಗಳ ಅರ್ಹತಾ ಪಟ್ಟಿಯ ವಿವರಗಳನ್ನು ಪರಿಗಣಿಸಿ ಪ್ರತಿಯೋರ್ವ ಅಭ್ಯರ್ಥಿಗೆ ಸಂಬಂಧಪಟ್ಟಂತೆ ವಿಚಾರಗಳನ್ನು ಗಣನೆಗೆ ತೆಗೆದುಕೊಂಡು ಸದರಿ ಪಟ್ಟಿಯಲ್ಲಿ ಸೂಚಿಸಿದ ಆದ್ಯತೆಯನ್ನೇ ಅನುಸರಿಸಿ, ಆದ್ಯತೆಯಂತೆ ಪ್ರಥಮ ಸ್ಥಾನದಲ್ಲಿರುವ ಡಾ:ಶಿವಾನಂದ ಇವರನ್ನು ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕರಾಗಿ ನೇಮಕಾತಿ ಮಾಡಲು ಒಮ್ಮತದಿಂದ ತೀರ್ಮಾನಿಸಲಾಯಿತಲ್ಲದೆ, ನೇಮಕಾತಿ ಅವಧಿಯನ್ನು ಸಂಸ್ಥೆಯ ನಿಯಮಾವಳಿಗಳನುಸಾರವಾಗಿ 3 ವರ್ಷಗಳಾಗಿರಬೇಕೆಂದು ತೀರ್ಮಾನಿಸಿತು. ಅಲ್ಲದೆ ಡಾ: ಶಿವಾನಂದರವರ ಜನ್ಮ ದಿನಾಂಕ:30.8.1947 ಆಗಿದ್ದು, ಅವರ ನೇಮಕಾತಿ ಆದೇಶವನ್ನು ತಕ್ಷಣವೇ ಹೊರಡಿಸಬೇಕೆಂದು ತೀರ್ಮಾನಿಸಿತು.

ಸಂಸ್ಥೆಯ ಆಡಳಿತ ಮಂಡಳಿಯ ತೀರ್ಮಾನದ ಹಿನ್ನೆಲೆಯಲ್ಲಿ ಡಾ:ಶಿವಾನಂದ ಇವರನ್ನು ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು ಇಲ್ಲಿಗೆ ನಿರ್ದೇಶಕರನ್ನಾಗಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 2 ಪಿಟಿಡಿ 2008, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ಆಡಳಿತ ಮಂಡಳಿಯ ಸಭೆಯ ದಿ:25.8.2009ರ ನಡವಳಿಯ ತೀರ್ಮಾನದಂತೆ ಡಾ: ಶಿವಾನಂದ ನಿವೃತ್ತ ಪ್ರಾಧ್ಯಾಪಕರು, ಶಿಶುವೈದ್ಯ ಶಾಸ್ತ್ರ ಇವರನ್ನು ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ 3 ವರ್ಷದ ಅವಧಿಗೆ ಅಥವಾ ಮುಂದಿನ ಆದೇದವರೆಗೆ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2113

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ, ವಾಹನಭತ್ಯೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ :ಜಸಂಇ 88 ಸೇಅವಿ/08, ದಿ :24.2.2009.
2) ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿ :25.6.2009.

**ಪ್ರಸ್ತಾವನೆ:**

ಶ್ರೀ ಎಂ. ಮಂಜುನಾಥ್ ಹಿರಿಯ ಸಹಾಯಕರು, ಇವರು ಜಲ ಸಂಪನ್ಮೂಲ ಇಲಾಖೆಯ (ತಾಂತ್ರಿಕ–1) ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿ:28.10.2008 ರಿಂದ ದಿ:16.12.2008ರವರೆಗೆ ಅನಧಿಕೃತವಾಗಿ ಗೈರುಹಾಜರಾಗಿದ್ದರ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿ:24.2.2009ರ ಸರ್ಕಾರಿ ಆದೇಶದಲ್ಲಿ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ದಿ:25.6.2009ರಂದು ಸಲ್ಲಿಸಿ, ವಿಚಾರಣೆಯನ್ನು ಕೈಗೊಂಡ ಪ್ರಯುಕ್ತ ನಿಗದಿ ಪಡಿಸಿದ ಸಂಭಾವನೆಯನ್ನು ಮಂಜೂರು ಮಾಡಲು ಕೋರಿರುತ್ತಾರೆ. ಅದರಂತೆ, ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಜಸಂಇ 88 ಸೇಅವಿ/08, ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2009**

ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ಶ್ರೀ ಎಂ. ಮಂಜುನಾಥ್, ಹಿರಿಯ ಸಹಾಯಕರು, ಜಲ ಸಂಪನ್ಮೂಲ ಇಲಾಖೆ, ಇವರ ಗೈರು ಹಾಜರಿ ಬಗ್ಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 22 ಸೇಇವಿ 2007, ದಿ:11.4.2008ರನ್ವಯ ರೂ. 8,000–00 (ಎಂಟು ಸಾವಿರ ರೂಪಾಯಿಗಳು ಮಾತ್ರ) ಸಂಭಾವನೆಯನ್ನು ಹಾಗೂ ರೂ. 1,500–00 (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ವಾಹನಭತ್ಯೆಯನ್ನು ಮಂಜೂರು ಮಾಡಿ ಈ ಮೂಲಕ ಆದೇಶಿಸಲಾಗಿದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರದ ಸಚಿವಾಲಯ–051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2114

**ಎಸ್.ಬಿ. ರುದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸೇವೆಗಳು–ಬಿ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ 2009–10ನೇ ಸಾಲಿನಲ್ಲಿ ಎರಡನೇ ಕಂತಾಗಿ ರೂ. 495.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ :ಯೋಇ 33 ಹೈಕಮಂ 2009 ದಿನಾಂಕ :24.8.2009.
2) ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ : ಹೈಕಮಂ/ಲೆಶಾ/2009–10 ದಿನಾಂಕ :17.8.2009

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–01–(ಯೋಜನೆ)" ಅಡಿಯಲ್ಲಿ ರೂ. 2100.00ಲಕ್ಷಗಳನ್ನು ಒದಗಿಸಿದ್ದು, ಈಗಾಗಲೇ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮೊದಲನೇ ಕಂತಾಗಿ ರೂ. 400.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಎರಡನೇ ಕಂತಿನ ಹಣವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಮಂಡಳಿಗೆ ಎರಡನೇ ಕಂತಾಗಿ ರೂ. 495.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 33 ಹೈಕಮಂ 2009, ಬೆಂಗಳೂರು, ದಿನಾಂಕ:25ನೇ ಆಗಸ್ಟ್, 2009**

2009–10ನೇ ಸಾಲಿನಲ್ಲಿ ಹೈದರಾಬಾದ್ ಪ್ರದೇಶಾಭಿವೃದ್ಧಿ ಮಂಡಳಿಗೆ ಎರಡನೇ ಕಂತಾಗಿ ಲೆಕ್ಕಶೀರ್ಷಿಕೆ "2515–00–800–0–01–101 (ಸಹಾಯಾನುದಾನ) (ಯೋಜನೆ)" ಅಡಿಯಲ್ಲಿ ರೂ. 495.00 ಲಕ್ಷಗಳನ್ನು (ನಾನ್ನೂರ ತ್ತೊಂಬತ್ತೈದು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

2) ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2009–10ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3) ಈ ಆದೇಶವನ್ನು ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.5.2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2115

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ವಿಷಯ :** ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2007–08ನೇ ಸಾಲಿನಲ್ಲಿ ಕೊನೆಯ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ :ಯೋಇ 37 ಯೋವಿವಿ 2007, ದಿನಾಂಕ :16.6.2007
2) ಸರ್ಕಾರಿ ಆದೇಶ ಸಂಖ್ಯೆ :ಯೋಇ 37 ಯೋವಿವಿ 2007, ದಿನಾಂಕ :16.11.2007
3) ಸರ್ಕಾರಿ ಆದೇಶ ಸಂಖ್ಯೆ :ಯೋಇ 37 ಯೋವಿವಿ 2007, ದಿನಾಂಕ :19.3.2008
4) ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ :ಶಾಸ್ಥೊರ ಅಯೋ/94/07–08 ದಿನಾಂಕ :9.4.2009.
5) ಮಾನ್ಯ ಗೃಹ ಸಚಿವರ ದಿನಾಂಕ :6.4.2009ರ ಪತ್ರ.

**ಪ್ರಸ್ತಾವನೆ:**

ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2007–08ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2575–60–265–0–02–059 (ಯೋಜನೇತರ)" ಅಡಿಯಲ್ಲಿ 300.00ಕೋಟಿ ರೂ.ಗಳನ್ನು ಒದಗಿಸಲಾಗಿದ್ದು, ಇದರಲ್ಲಿ ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಮೊದಲನೇ ಕಂತಾಗಿ ರೂ. 75.00ಕೋಟಿಗಳನ್ನು ಮೇಲೆ ಓದಲಾದ ದಿನಾಂಕ:16.6.2007ರ ಆದೇಶದಲ್ಲಿ, ಎರಡನೇ ಕಂತಾಗಿ ರೂ. 73,75 ಕೋಟಿಗಳನ್ನು ಮೇಲೆ ಓದಲಾದ (2)ರ ಆದೇಶದಲ್ಲಿ ಹಾಗೂ ಕೊನೆಯ ಕಂತಾಗಿ ರೂ. 34.50 ಕೋಟಿಗಳನ್ನು ಮೇಲೆ ಓದಲಾದ (3)ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

2007–08ನೇ ಸಾಲಿನ ಕೊನೆಯ ಅನುದಾನವು ಉಡುಪಿ ಮತ್ತು ಗುಲ್ಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಗೆ ಸಕಾಲದಲ್ಲಿ ಜಮಾ ಮಾಡಿಕೊಂಡಿರುವುದಿಲ್ಲ. ಉಲ್ಲೇಖ 4 ಮತ್ತು 5ರ ಪತ್ರದಲ್ಲಿ ಅನುದಾನವನ್ನು ನವೀಕರಿಸಲು ಕೋರಲಾಗಿತ್ತು. ಆರ್ಥಿಕ ಇಲಾಖೆಯು ಅನುದಾನವನ್ನು ನವೀಕರಿಸಲು ಸಾಧ್ಯವಿಲ್ಲವೆಂದು ಹಾಗೂ 2009–10ನೇ ಸಾಲಿನ ಆಯವ್ಯಯದ ಅನುದಾನದಿಂದ ಬಿಡುಗಡೆ ಮಾಡಲು ತಿಳಿಸಿತು. ಆದುದರಿಂದ, ಉಡುಪಿ ಮತ್ತು ಗುಲ್ಬರ್ಗಾ ಜಿಲ್ಲೆಯ ಮಾನ್ಯ ವಿಧಾನ ಪರಿಷತ್ತಿನ ಸದಸ್ಯರುಗಳಿಗೆ ತಲಾ ರೂ. 50.00ಲಕ್ಷದಂತೆ ರೂ. 200.00ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 43 ಯೋವಿವಿ 2009, ಬೆಂಗಳೂರು, ದಿನಾಂಕ:25ನೇ ಆಗಸ್ಟ್, 2009**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2575–60–265–0–02–059(ಯೋಜನೆ) ಅಡಿಯಲ್ಲಿ ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2007–08ನೇ ಸಾಲಿನ ಕಡೆಯ ಕಂತಾಗಿ ಉಡುಪಿ ಮತ್ತು ಗುಲ್ಬರ್ಗಾ ಜಿಲ್ಲೆಗಳ ವಿಧಾನ

ಪರಿಷತ್ ಸದಸ್ಯರು ಆಯ್ಕೆ ಮಾಡಿಕೊಂಡಿರುವ ಅನುಬಂಧದಲ್ಲಿ ಸೂಚಿಸಿರುವ ಕ್ಷೇತ್ರಗಳಿಗೆ ತಲಾ ರೂ. 50.00ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳಂತೆ ಒಟ್ಟು ರೂ. 200.00 ಲಕ್ಷಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

(2) ಈ ಬಿಡುಗಡೆಯಾದ ಮೊತ್ತವನ್ನು ಸರ್ಕಾರದ ಪತ್ರದ ಸಂಖ್ಯೆ:ಪಿಡಿ 250 ಪಿಎಂಎಂ 2002, ದಿನಾಂಕ:5.3.2002 ರ ಪ್ರಕಾರ ಜಿಲ್ಲಾಧಿಕಾರಿಗಳ ವೈಯಕ್ತಿಕ ಖಾತೆ (ಪಿಡಿ ಅಕೌಂಟ್)ಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು.

(3) ಈ ಬಿಡುಗಡೆಯಾದ ಮೊತ್ತಕ್ಕೆ ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು ಸರ್ಕಾರದ ಆದೇಶ ಸಂಖ್ಯೆ:ಪಿಡಿ 486 ಪಿಎಂಎಂ 2001, ದಿನಾಂಕ:16.7.2001ರಲ್ಲಿ ಯೋಇ 40 ಪಿಎಂಎಂ 2005, ದಿನಾಂಕ:15.3.2006ರಲ್ಲಿ ಹಾಗೂ ಯೋಇ 17 ಯೋವಿವಿ 2007 ದಿನಾಂಕ:20.9.2007ರಲ್ಲಿ ನೀಡಿರುವ ಮಾರ್ಗಸೂಚಿಯಂತೆ, ಅನುಷ್ಠಾನಗೊಳಿಸತಕ್ಕದ್ದು.

4) ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು ಆಯಾ ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ.

5) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2575–60–265–0–02–059 ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

6) ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 371 ವೆಚ್ಚ–6:2009 ದಿನಾಂಕ:20.7.2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ:ಯೋಇ 43 ಯೋವಿವಿ 2009, ದಿನಾಂಕ:25ನೇ ಆಗಸ್ಟ್, 2009**

| ಕ್ರ.ಸಂ | ವಿಧಾನ ಪರಿಷತ್ತಿನ ಸದಸ್ಯರುಗಳ ಹೆಸರು (ಶ್ರೀ /ಶ್ರೀಮತಿ | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|---|
| 1. ಗುಲ್ಬರ್ಗಾ ಜಿಲ್ಲೆ | | | |
| 1 | ಸುಶೀಲ್ ಜಿ. ನಮೋಶಿ | ಗುಲ್ಬರ್ಗಾ | 50.00 |
| 2 | ಅಮಾತೆಪ್ಪ ಎಂ ಕಂದಕೂರ್ | ಗುಲ್ಬರ್ಗಾ | 50.00 |
| | | ಒಟ್ಟು | 100.00 |
| 2) ಉಡುಪಿ ಜಿಲ್ಲೆ | | | |
| 1. | ಕೆ. ಪ್ರತಾಪಚಂದ್ರ ಶೆಟ್ಟಿ | ಉಡುಪಿ | 50.00 |
| 2. | ಡಾ: ವಿ.ಎಸ್. ಆಚಾರ್ಯ | ಉಡುಪಿ | 50.00 |
| | | ಒಟ್ಟು | 100.00 |
| | | ಒಟ್ಟು ಮೊತ್ತ ರೂ. | 200.00 |

**ಬಿ. ಚಿಕ್ಕರಾಜು**
ಪಿ.ಆರ್. 2116 ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯಕ ಇಲಾಖೆ, ಅವರ ವಿರುದ್ದ ಇಲಾಖೆ ವಿಚಾರಣಾ ಮಂಡನಾಧಿಕಾರಿ ನೇಮಕ –ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 05 ಇಮುವಿ 2008, ದಿನಾಂಕ :17.1.2009

2) ಶಿಕ್ಷಣ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ : ಇಡಿ 161 ಎಲ್ಐಬಿ 2009, ದಿನಾಂಕ:20.7. 2009.

**ಪ್ರಸ್ತಾವನೆ:**

ಶ್ರೀ ಪಿ.ಬೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರು ತಮ್ಮ ಅಧಿಕಾರದ ಅವಧಿಯಲ್ಲಿ ಗಣಕ ಯಂತ್ರಗಳ ಖರೀದಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯ ಲೋಪ ಹಾಗೂ ಹಣ ದುರುಪಯೋಗ ಎಸಗಿರುವ ಮತ್ತು ಅಧಿಕಾರ ದುರುಪಯೋಗ ಪಡಿಸಿಕೊಂಡಿರುವ ಒಟ್ಟು 7 ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:17.1.2009ರ ಸರ್ಕಾರಿ ಆದೇಶದಲ್ಲಿ ಆದೇಶಿಸಿ, ಇಲಾಖಾ ವಿಚಾರಣೆಯನ್ನು ಆದೇಶಿಸಿ, ಶ್ರೀ ಎಂ. ಸುಬ್ಬರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಶ್ರೀ ಎನ್.ಎಫ್. ನಾಗೇಶ್ ಉಪ ನಿರ್ದೇಶಕರು, ನಗರ ಕೇಂದ್ರ ಗ್ರಂಥಾಲಯ ಜಯನಗರ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿಯೂ ನೇಮಕ ಮಾಡಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ:20.7.2009ರ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯ ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾದ ಶ್ರೀ ಎನ್.ಎಫ್. ನಾಗೇಶ್ ಉಪ ನಿರ್ದೇಶಕರು, ಇವರನ್ನು ಆಪಾದನಾ ಪಟ್ಟಿಯಲ್ಲಿನ ಕೆಲವು ವಿಷಯಗಳಿಗೆ ಸಾಕ್ಷಿದಾರರನ್ನಾಗಿ ಮಾಡಲಾಗಿರುವುದರಿಂದ ಅವರು ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು ಸಮಂಜಸವಲ್ಲವೆಂದು ಅವರ ಬದಲಿಗೆ ಶ್ರೀ ಆರ್.ಕೆ. ಬಡಿಗಣ್ಣವರ್ ಉಪ ನಿರ್ದೇಶಕರು, ಜಿಲ್ಲಾ ಕೇಂದ್ರ ಗ್ರಂಥಾಲಯ (ಗ್ರಾಮಾಂತರ) ವಿಜಯನಗರ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ತಿಳಿಸಿದೆ. ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 06 ಇಮುವಿ 2009, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸ್ಪಟ್ಟ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 06 ಇಮುವಿ 2008, ದಿನಾಂಕ:17.1.2009ನ್ನು ಭಾಗಶಃ ಮಾರ್ಪಡಿಸಿ, ಶ್ರೀ ಎನ್.ಎಫ್. ನಾಗೇಶ್, ಉಪನಿರ್ದೇಶಕರು, ನಗರ ಕೇಂದ್ರ ಗ್ರಂಥಾಲಯ, ಜಯನಗರ ಬೆಂಗಳೂರು ಇವರ ಸ್ಥಾನದಲ್ಲಿ ಶ್ರೀ ಆರ್.ಕೆ. ಬಡಿಗಣ್ಣವರ್, ಉಪನಿರ್ದೇಶಕರು, ಜಿಲ್ಲಾ ಕೇಂದ್ರ ಗ್ರಂಥಾಲಯ (ಗ್ರಾಮಾಂತರ) ವಿಜಯನಗರ ಬೆಂಗಳೂರು ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಕರ್ನಾಟಕ ನಾಗರೀಕ ಸೇವಾ (ಮೇಲ್ಮನವಿ, ವರ್ಗೀಕರಣ ಮತ್ತು ನಿಯಂತ್ರಣ) ನಿಯಮ 11(15)(ಸಿ) ಅನ್ವಯ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2118

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಆರ್ಥಿಕ ಸಚಿವಾಲಯ

**ತಿದ್ದುಪಡಿ ಸಂಖ್ಯೆ:ಆಇ 143 ವಾತೆಸಿ 2009, ಬೆಂಗಳೂರು, ದಿನಾಂಕ:1ನೇ ಸೆಪ್ಟೆಂಬರ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 143 ವಾತೆಸಿ 2009, ದಿನಾಂಕ:27.5.2009ರ ಕ್ರಮ ಸಂಖ್ಯೆ 16ರ "ಶ್ರೀಮತಿ ಪಿ.ಡಿ. ಶೋಭಾ" ಅವರ ಹೆಸರಿನ ಮುಂದೆ ನಮೂದಾಗಿರುವ ದಿನಾಂಕ:7.6.2008 ಎಂಬುದರ ಬದಲಾಗಿ "7.5.2008" ಎಂದು ಮತ್ತು ಕ್ರಮ ಸಂಖ್ಯೆ 24ರ ಶ್ರೀಮತಿ "ಅನ್ನಪೂರ್ಣ ಎಸ್. ಚೌರ್" ಅವರ ಹೆಸರಿನ ಮುಂದೆ ನಮೂದಾಗಿರುವ ದಿನಾಂಕ:8.6.2008 ಎಂಬುದರ ಬದಲಾಗಿ "8.5.2008"ಎಂದು ತಿದ್ದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2121

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ವಾ.ತೆ –2 & ಸಮನ್ವಯ)

## ಸಹಕಾರ ಸಚಿವಾಲಯ

**ವಿಷಯ :** ತಾತಗುಣಿ ಶ್ರೀ ಮಾರುತಿ ಟೀಚರ್ಸ್ ಅಂಡ್ ಪೇರೆಂಟ್ಸ್ ಎಜುಕೇಷನ್ ಸೊಸೈಟಿ ಬೆಂಗಳೂರು, ದಕ್ಷಿಣ ತಾಲ್ಲೂಕು, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಸಹಕಾರ ಸಂಘಗಳ ನಿಬಂಧಕರವರ ಪತ್ರ ಸಂಖ್ಯೆ :ಡಿಆರ್/ಎಸ್ಒಆರ್/ಪಿಟಿಷನ್/79/2008–09 ದಿನಾಂಕ :11.6.2009 ಮತ್ತು ವಿಚಾರಣಾ ವರದಿ ದಿನಾಂಕ :16.5.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ:16.5.2009 ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ವಿಚಾರಣಾ ವರದಿಯಲ್ಲಿ ತಾತಗುಣಿ ಶ್ರೀ ಮಾರುತಿ ಟೀಚರ್ಸ್ ಅಂಡ್ ಪೇರೆಂಟ್ಸ್ ಎಜುಕೇಷನ್ ಸೊಸೈಟಿ, ಬೆಂಗಳೂರು ದಕ್ಷಿಣ ತಾಲ್ಲೂಕು. ಬೆಂಗಳೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಪ್ರಕಾರ ಸಂಖ್ಯೆ:1041/92 ರಂತೆ ದಿನಾಂಕ:13.2.1992 ರಂದು ನೋಂದಣಿಯಾಗಿದ್ದು, ಸದರಿ ಸಂಘದ 2005–06 ನೇ ಸಾಲಿನ

ಲೆಕ್ಕಪತ್ರಗಳನ್ನು ದಿನಾಂಕ:10.8.2005 ರಂದು ಫೈಲಿಂಗ್ ಮಾಡಲಾಗಿರುತ್ತದೆ. ದಿನಾಂಕ:1.4.2005 ರಿಂದ 31.3.2007 ರವರೆಗೆ ಲೆಕ್ಕಪತ್ರಗಳು ಹಾಗೂ 2007–08ನೇ ಸಾಲಿನ ಕಾರ್ಯಕಾರಿ ಸಮಿತಿ ಪಟ್ಟಿಯನ್ನು ಎದುರು ಅರ್ಜಿದಾರರನ್ನೊಳಗೊಂಡ ಸಮಿತಿ ದಿನಾಂಕ:7.5.2007 ರಂದು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಿರುತ್ತಾರೆ. ಶ್ರೀ ತಿಮ್ಮರಾಯಪ್ಪ ಮತ್ತು ಶ್ರೀ ಜಿ. ನಾರಾಯಣಸ್ವಾಮಿ ಇವರು ಜಿಲ್ಲಾನೋಂದಣಾಧಿಕಾರಿಗಳಿಗೆ ಸಲ್ಲಿಸಿರುವ ದೂರು ಅರ್ಜಿಗಳನ್ವಯ ಕಾರ್ಯಕಾರಿ ಸಮಿತಿ ಪಟ್ಟಿ ಲೆಕ್ಕಪತ್ರಗಳ ಸತ್ಯಾಸತ್ಯತೆಯನ್ನು ತಿಳಿಸಯಲು ಎರಡು ಗುಂಪುಗಳು ನೀಡಿರುವ ದಾಖಲೆ ಪತ್ರಗಳನ್ನು ಪರಿಶೀಲಿಸಲಾಗಿರುತ್ತದೆ. ಇದೇ ಸಂಬಂಧವಾಗಿ ಶ್ರೀ ಬಿ.ಎಸ್. ಪ್ರಭಾಕರ್ ರವರು ರಾಜ್ಯ ಉಚ್ಚ ನ್ಯಾಯಾಲಯದ ಅರ್ಜಿ ಸಂಖ್ಯೆ: ರ 12425/2008 ರಲ್ಲಿ ಪ್ರಕರಣ ದಾಖಲಿಸಿದ್ದು, ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಿ ವಿಚಾರಣೆಯನ್ನು ಇತ್ಯರ್ಥಪಡಿಸಲು ತೀರ್ಪು ನೀಡಿದ್ದು, ಅದರಂತೆ ವಿಚಾರಣೆಯನ್ನು ದಿನಾಂಕ:16.5.2009 ರಂದು ನಡೆಸಲಾಗಿದ್ದು, ಸದರಿ ವಿಚಾರಣಾ ಸಮಯದಲ್ಲಿ ಎರಡು ಗುಂಪುಗಳಿಗೆ ಹೇಳಿಕೆ ಮತ್ತು ದಾಖಲೆಗಳನ್ನು ಹಾಜರುಪಡಿಸಲು ಅವಕಾಶ ನೀಡಿ, ದಾಖಲೆ ಮತ್ತು ಹೇಳಿಕೆಗಳನ್ನು ಪರಿಶೀಲಿಸಲಾಗಿದೆ. ಸರ್ವಸದಸ್ಯರ ಸಭೆ ನಿಯಮಾನುಸಾರ ನಡೆಸಿದ ಬಗ್ಗೆ ದಾಖಲೆ ಇಲ್ಲದೇ ಇರುವುದು ಹಾಗೂ ಉಭಯತ್ರರು ಎಸಗಿರುವ ಲೋಪಗಳ ಬಗ್ಗೆ ವಿಚಾರಣೆ ನಡೆಸಿದ್ದು ಸರ್ವ ಸದಸ್ಯರ ಸಭೆ ನಡೆದು ಚುನಾವಣೆ ನಡೆಸಿಲ್ಲವೆಂಬ ಕಾರಣ ಹಾಗೂ ದಿನಾಂಕ:31.3.2005ರ ವರೆಗೆ ಎರಡು ಗುಂಪುಗಳು ಯಾವುದೇ ಭಿನ್ನಮತ ಅಥವಾ ತಂಟೆತಕರಾರು ಸುಗಮವಾಗಿ ನಡೆದುಕೊಂಡು ಬಂದಿರುವುದು ಸ್ಪಷ್ಟವಾಗಿದ್ದು, ಸದರಿ ಅವಧಿವರೆಗೆ ಸಲ್ಲಿಸಿರುವ ಮಾಹಿತಿಗಳು ಕ್ರಮಬದ್ಧವಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ತದನಂತರ ಸಂಘದಲ್ಲಿ ಎರಡು ಗುಂಪುಗಳು ಉದ್ಭವಿಸಿದ್ದು, ಭಿನ್ನಾಭಿಪ್ರಾಯ ಉಂಟಾಗಿರುವುದರಿಂದ, ಹಾಗೂ ಸಂಘವು ಸಹಕಾರ ಸಂಘಗಳ ಕಾಯ್ದೆ 1960 ರನ್ವಯ ಪ್ರತಿ ವರ್ಷ ಸರ್ವ ಸದಸ್ಯರ ಸಭೆ ನಡೆಸಿ ಲೆಕ್ಕಪತ್ರ ಸಲ್ಲಿಸದೇ ಇರುವುದು ಕಂಡು ಬಂದಿರುವುದರಿಂದ ಮತ್ತು ಸದರಿ ಸಂಸ್ಥೆಯ ಒಂದು ಶಿಕ್ಷಣ ಸಂಸ್ಥೆಯಾಗಿದ್ದು ಶಾಲೆಯ ಮತ್ತು ಮಕ್ಕಳ ಹಿತದೃಷ್ಟಿಯಿಂದ ಉತ್ತಮ ವಾತಾವರಣ ಸೃಷ್ಟಿಯಾಗುವುದು ಅನಿವಾರ್ಯವಾಗಿದ್ದು ಹಾಗೂ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 11, 12 ಮತ್ತು 13 ಗಳನ್ನು ಉಲ್ಲಂಘಿಸಿ ಸಂಘದಲ್ಲಿ ಗುಂಪುಗಾರಿಕೆ ಉಂಟಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ದಿನಾಂಕ:11.6.2009ರ ಪತ್ರದಲ್ಲಿ ತಿಳಿಸಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಹಾಗೂ ವಿಚಾರಣಾ ವರದಿಗಳನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 85 ಸಸಂನೋ 2009, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್, 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತಾತಗುಣಿ ಶ್ರೀ ಮಾರುತಿ ಟೀಚರ್ಸ್ ಅಂಡ್ ಪೇರೆಂಟ್ಸ್ ಎಜುಕೇಷನ್ ಸೊಸೈಟಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)(1)(ಸಿ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಮೂರು (3) ತಿಂಗಳ ಅವಧಿಗೆ ಅಥವಾ ಸದರಿ ಅವಧಿಯಲ್ಲಿ ಸಂಘಕ್ಕೆ ಆಡಳಿತ ಮಂಡಳಿಗೆ ಹಾಲಿ ಇರುವ ಸದಸ್ಯರಿಂದ ಚುಣಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2122

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

**ವಿಷಯ :** ಆರ್.ಕೆ.ಎಸ್. ಎಜುಕೇಷನ್ ಸೊಸೈಟಿ (ರಿ), ಅರಳೇಪೇಟೆ, ಬೆಂಗಳೂರು ಈ ಸಂಸ್ಥೆಗೆ ಚುನಾವಣೆ ನಡೆಸುವ ಸಲುವಾಗಿ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1) ಸಹಕಾರ ಸಂಘಗಳ ನಿಂಬಂಧಕರು, ಆಲಿಆಸ್ಕರ್ ರಸ್ತೆ, ಬೆಂಗಳೂರುರವರ ಪತ್ರ ಸಂಖ್ಯೆ : ಡಿಆರ್/ಎಸ್ಒಆರ್/ವಿಚಾರಣೆ/11/2008–09 ದಿ :25.9.2009.

2) ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ :ಸಇ 83 ಸಸಂನೋ 2008 ದಿನಾಂಕ :30.1.2009.

3) ಸರ್ಕಾರದ ಪತ್ರ ಸಂಖ್ಯೆ :ಸಇ 83 ಸಸಂನೋ 2008 ದಿನಾಂಕ :16.4.2009.

4) ಸಹಕಾರ ಸಂಘಗಳ ನಿಬಂಧಕರು, ಆಲಿಅಸ್ಕರ್ ರಸ್ತೆ, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಆರ್/ ಎಸ್ಒಆರ್/ವಿಚಾರಣೆ/11/2008–09 ದಿ :15.7.2009.

**ಪ್ರಸ್ತಾವನೆ:**

ಆರ್.ಕೆ.ಎಸ್. ಎಜುಕೇಷನ್ ಸೊಸೈಟಿ (ರಿ) ಅರಳೇಪೇಟೆ, ಬೆಂಗಳೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಪ್ರಕಾರ ಸಂಖ್ಯೆ:1360/1956–57 ರಂತೆ ದಿನಾಂಕ: 30.8.1956 ರಂದು ನೋಂದಣಿಯಾಗಿರುತ್ತದೆ. ಈ ಸಂಘಕ್ಕೆ ಈ ಹಿಂದೆ ಆಡಳಿತಾಧಿಕಾರಿಯನ್ನು ನೇಮಿಸಲಾಗಿದ್ದು, ದಿನಾಂಕ: 6.4.2003 ರಂದು ಚುನಾವಣೆ ನಡೆಸಿ, ಚುನಾಯಿತರಾಗಿರುವ ಕಾರ್ಯಕಾರಿ ಸಮಿತಿಯ ಅವಧಿಯು ದಿನಾಂಕ: 8.4.2003 ರಂದು ಅಧಿಕಾರ ವಹಿಸಿರುತ್ತದೆ ಮತ್ತು ಇದರ ಅವಧಿ ದಿನಾಂಕ:5.4.2008 ರಂದು ಮುಕ್ತಾಯವಾಗಿರುತ್ತದೆ.

ದಿನಾಂಕ: 6.4.2003 ರಂದು ಚುನಾಯಿತರಾದ ಕಾರ್ಯಕಾರಿ ಸಮಿತಿಯ ಅವಧಿ ಮುಗಿಯುವ ಮೊದಲೇ ದಿನಾಂಕ:17.6.2007 ರಂದು ವಾರ್ಷಿಕ ಸರ್ವ ಸದ್ಯರ ಸಭೆ ಮತ್ತು ಚುನಾವಣೆ ನಡೆಸಿರುವುದು ಕಾನೂನುಬದ್ಧವಾಗಿಲ್ಲವೆಂದು ಸಂಘದ ಅಧ್ಯಕ್ಷರಾದ ಶ್ರೀ ಜಿ.ಎಲ್. ನರಸಿಂಹಮೂರ್ತಿ ಮತ್ತು ಇತರರು ಜಿಲ್ಲಾ ನೋಂದಣಾಧಿಕಾರಿಗಳು, ಗಾಂಧಿನಗರ ನೋಂದಣಿ ಜಿಲ್ಲೆ, ಬೆಂಗಳೂರು ಇವರಿಗೆ ಅರ್ಜಿ ಸಲ್ಲಿಸಿದ್ದು, ಅದರಂತೆ ಅವರು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 25 ರಂತೆ ವಿಚಾರಣೆ ನಡೆಸಿ ಮೇಲೆ ಓದಲಾದ (1) ರ ವಿಚಾರಣಾ ವರದಿಯಲ್ಲಿ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ದಿನಾಂಕ:17.6.2007 ರಂದು ನಡೆದ ವಾರ್ಷಿಕ ಸರ್ವ ಸದಸ್ಯರ ಸಭೆಯು ಕಾನೂನು ಬಾಹಿರವಾಗಿದೆ ಎಂದು ತಿಳಿಸಲಾಗಿದ್ದು, ದಿನಾಂಕ:6.4.2003 ರಂದು ಚುನಾಯಿತ ಕಾರ್ಯಕಾರಿ ಸಮಿತಿಯ ಅವಧಿಯು ಈಗಾಗಲೇ ಮುಕ್ತಾಯವಾಗಿರುವುದರಿಂದ, ಹಿಂದಿನ ಕಾರ್ಯಕಾರಿ ಸಮಿತಿ ಈಗಲೂ ಸಹ ಸಂಘದ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಲು ಅರ್ಹವಾಗಿದೆ ಎಂದು ಅಭಿಪ್ರಾಯ ತಾಳುವುದು ಸರಿಯಲ್ಲವಾದ್ದರಿಂದ, ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ರವರು ತಮ್ಮ ವಿಚಾರಣಾ ವರದಿಯನ್ವಯ ಅಭಿಪ್ರಾಯ ಪಟ್ಟಿರುವುದರಿಂದ, ಸದರಿ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಅವಧಿ ದಿನಾಂಕ:5.4.2008ರಂದೇ ಮುಗಿದಿರುವುದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ ಉಪನಿಬಂಧಕರು–2, ಬೆಂಗಳೂರು ನಗರ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ವರದಿಯನ್ನು ಆಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರಿಗೆ ಕಾರಣ ಕೇಳುವ ಸೂಚನೆಯನ್ನು ಜಾರಿಗೊಳಿಸಿದ್ದು, ಸದರಿ ನೋಟೀಸು ಜಾರಿ ಆಗದೇ ವಾಪಸ್ಸು ಬಂದಿದ್ದು, ಸದರಿ ನೋಟೀಸುಗಳನ್ನು ಸಂಘದ ನೈಜ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರಿಗೆ ಜಾರಿಗೊಳಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಂತೆ ದಿನಾಂಕ:30.1.2009 ರಂದು ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ನೀಡುವಂತೆ ಕಾರಣ ಕೇಳುವ ಸೂಚನಾ ಪತ್ರವನ್ನು ಕಳುಹಿಸಲಾಗಿರುತ್ತದೆ.

ಶ್ರೀ ಜಿ.ಎಲ್. ನರಸಿಂಹಮೂರ್ತಿ ನೇತೃತ್ವದ ಸಂಘವು ನೀಡಿರುವ ಉತ್ತರದಲ್ಲಿ ತಮ್ಮ ಸಂಘ ನೈಜ್ಯವಾಗಿದ್ದು, ಸದರಿ ಸಂಘದ ಅವಧಿ ಮುಗಿದಿದ್ದು, ಸಂಘಕ್ಕೆ ಚುನಾವಣೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಿಸಲು ಕೋರಿರುತ್ತಾರೆ. ಸದರಿ ಸಂಘದ ಮತ್ತೊಂದು ಗುಂಪು ಸರ್ಕಾರ ಜಾರಿಗೊಳಿಸಿರುವ ನೋಟೀಸನ್ನು ನಮಗೆ ಜಾರಿ ಮಾಡಿರುವುದಿಲ್ಲವೆಂದು ತಿಳಿಸುತ್ತಾ, ನೋಟೀಸನ್ನು ನೀಡುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಸರ್ಕಾರವು ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:1296/2008 ಮತ್ತು ರಿಟ್ ಅಪೀಲು ಸಂಖ್ಯೆ:479/2008 ರಲ್ಲಿ ನ್ಯಾಯಾಲಯವು ನೀಡಿರುವ ತೀರ್ಪುಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಸ್ಪಷ್ಟ ಅಭಿಪ್ರಾಯ ನೀಡುವಂತೆ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರನ್ನು ಕೋರಲಾಗಿರುತ್ತದೆ.

ಅದರಂತೆ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ನ್ಯಾಯಾಲಯದ ತೀರ್ಪುಗಳ ಅನ್ವಯ ಪರಿಶೀಲಿಸಿ ಈಗಾಗಲೇ ಆಡಳಿತ ಮಂಡಳಿ ಕಾರ್ಯ ಅವಧಿ ಮುಗಿದಿರುವುದರಿಂದ ಹಾಗೂ ನೈಜ ಸಮಿತಿಯಲ್ಲಿ ಗೊಂದಲವಿರುವುದರಿಂದ, ಸದರಿ ವಿದ್ಯಾ ಸಂಸ್ಥೆಯ ಮತ್ತು ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ತುರ್ತಾಗಿ ಚುನಾವಣೆ ನಡೆಸುವುದು ಸೂಕ್ತವಾಗಿದ್ದು, ಆಡಳಿತಾಧಿಕಾರಿಯನ್ನು ನೇಮಿಸಿದ ನಂತರ ಅವರ ಸುಪರ್ದಿಯಲ್ಲಿ ಪಾರದರ್ಶಕತೆಯಿಂದ ಚುನಾಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವುದು ಸೂಕ್ತವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ, ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ತಮ್ಮ ಅಭಿಪ್ರಾಯವನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಕುರಿತು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 83 ಸಸಂನೋ 2008, ಬೆಂಗಳೂರು, ದಿನಾಂಕ:3ನೇ ಸೆಪ್ಟೆಂಬರ್, 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್.ಕೆ.ಎಸ್. ಎಜುಕೇಷನ್ ಸೊಸೈಟಿ (ರಿ), ಅರಳೇಪೇಟೆ, ಬೆಂಗಳೂರು ಈ ಸಂಸ್ಥೆಯ ಆಡಳಿತ ಮಂಡಳಿಯ ಅವಧಿ ಮುಗಿದಿರುವುದರಿಂದ, ವಿದ್ಯಾ ಸಂಸ್ಥೆ ಹಾಗೂ

ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಸಂಸ್ಥೆಯ ಪ್ರಸ್ತುತ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರ್.ಕೆ.ಎಸ್ ಎಜುಕೇಷನ್ ಸೊಸೈಟಿ (ರಿ), ಅರಳೇಪೇಟೆ, ಬೆಂಗಳೂರು ಈ ಸಂಘಕ್ಕೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ವಲಯ–2 ಇವರನ್ನು ಆಡಳಿತಾಧಿಕಾರಿಯನ್ನಾಗಿ ಮೂರು (3) ತಿಂಗಳ ಅವಧಿಗೆ ಅಥವಾ ಸದರಿ ಸಂಘದ ಹಾಲಿ ಸದಸ್ಯರಿಂದ ಕೂಡಲೇ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ನೋಂದಾಯಿತವಾಗಿರುವ ಸದಸ್ಯರುಗಳಿಂದ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2123

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

## PERSONNEL AND ADMINISTRATIVE REFORMS SECRETARIAT

## CORRIGENDUM

**No. DPAR 75 SAS 2009(P-I), Bangalore, Dated: 1st September, 2009**

In the Government Notification No. DPAR 75 SAS 2009 (P-I), dated 31.8.2009, for the word ''Gulbarga'' occurring in third line and second line of para 1 & 2 respectively and also at Sl.No. 12 of the address portion, the word ''Bangalore'' shall and shall always deemed to have been substituted.

By Order and in the name of the Governor of Karnataka,

**ASHOK P. ATRE**

P.R. 2124

Under Secretary to Government,

Department of Personnel and Administrative Reforms (Services-I)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಶಾಖೆಯನ್ನು ತೆರೆಯಲು ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ :ಆಕುಕ 108 ಪಿಟಿಡಿ 2009, ದಿನಾಂಕ :27.6.2009.
2) ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ :ಎಸ್ ಜೆಐಸಿ/ಲೆಕ್ಕಪತ್ರ/2009–10, ದಿನಾಂಕ :30.6.2009.
3) ಸರ್ಕಾರದ ಪತ್ರ ಸಂಖ್ಯೆ :ಆಇ 02 ಬಿಎಸ್‌ಜಿ 2009, ದಿನಾಂಕ :1.8.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಸರ್ಕಾರದ ಆದೇಶದಲ್ಲಿ, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಶಾಖೆಯನ್ನು ಮೈಸೂರಿನ ಶ್ರೀ ಕೃಷ್ಣ ರಾಜೇಂದ್ರ ಆಸ್ಪತ್ರೆಯಲ್ಲಿ ತೆರೆಯಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಿ, ಈ ಶಾಖೆಯನ್ನು ತೆರೆಯಲು ಬೇಕಾಗುವ ಅನುದಾನವನ್ನು ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2210–05–105–1–12–101 ಯೋಜನೆ ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸುವಂತೆ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (2) ರ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ನಿರ್ದೇಶಕರ ಪತ್ರದಲ್ಲಿ, ಸಂಸ್ಥೆಗೆ 2009–10ನೇ ಸಾಲಿನಲ್ಲಿ ಒದಗಿಸಿರುವ ಅನುದಾನವು ಸಂಸ್ಥೆಯ ಖರ್ಚು–ವೆಚ್ಚಗಳಿಗೆ ಸರಿ ಹೋಗುವುದರಿಂದ, ಈ ಅನುದಾನದ ಅಡಿಯಲ್ಲಿ ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಶಾಖೆಯನ್ನು ತೆರೆಯಲು ಕಷ್ಟಸಾಧ್ಯವಾಗುವುದರಿಂದ, ಮಾನ್ಯ ಮುಖ್ಯ ಮಂತ್ರಿಯವರು 2009–10ನೇ ಸಾಲಿನ ಆಯವ್ಯಯದಲ್ಲಿ ತೋರಿಸಿರುವಂತೆ ಸದರಿ ಸಂಸ್ಥೆಯ ಶಾಖೆಯನ್ನು ತೆರೆಯಲು ಲೆಕ್ಕ ಶೀರ್ಷಿಕೆ "2210–05–105–1–12–101" (ಯೋಜನೆ) ಸಹಾಯಾನುದಾನದ ಅಡಿಯಲ್ಲಿ ರೂ. 500.00 ಲಕ್ಷಗಳನ್ನು ಒದಗಿಸುವಂತೆ ಕೋರಿರುತ್ತಾರೆ.

2009–10ನೇ ಸಾಲಿನ ಪೂರಕ ಅಂದಾಜುಗಳ (ಮೊದಲನೇ ಕಂತು) ಅಭಿಯಾಚನೆ ಸಂಖ್ಯೆ:22 ರಲ್ಲಿ ಲೆಕ್ಕ ಶೀರ್ಷಿಕೆ 2210–05–105–1–12–101 ಸಹಾಯಾನುದಾದನದ ಅಡಿಯಲ್ಲಿ ರೂ. 500.00 ಲಕ್ಷಗಳನ್ನು ಹೆಚ್ಚುವರಿ ಅನುದಾನವಾಗಿ ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಶಾಖೆಯನ್ನು ತೆರೆಯಲು ಒದಗಿಸಲಾಗಿದೆ. ಆದುದರಿಂದ, ಪೂರಕ ಅಂದಾಜಿನಲ್ಲಿ ಒದಗಿಸಲಾದ ಅನುದಾನವನ್ನು ಬಿಡುಗಡೆ ಮಾಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 108 ಪಿಟಿಡಿ 2009, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಶಾಖೆಯನ್ನು ತೆರೆಯಲು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2210–05–105–1–12 ಯೋಜನೆ ಸವಿವರ ಲೆಕ್ಕ ಶೀರ್ಷಿಕೆ 101 ಸಹಾಯಾನುದಾನದ ಅಡಿಯಲ್ಲಿ ರೂ. 500.00 (ಐದುನೂರು ಲಕ್ಷ ರೂಪಾಯಿಗಳು ಮಾತ್ರ) ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 867 ವೆಚ್ಚ–5/2009, ದಿನಾಂಕ:16.7.2009 ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಆಕುಕ 830 ಆಂಆಸ 2009, ದಿನಾಂಕ:17.8.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2127

**ಎನ್. ಮಹಾಲಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ಹೆಚ್ಚುವರಿಯಾಗಿ ಸೃಜಿಸಲಾಗಿರುವ ಹೆಚ್ಚುವರಿ ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 408 ಸಅಸೇ 2008, ದಿನಾಂಕ :6.9.2008.

2) ಕಂದಾಯ ಇಲಾಖೆಯ ಕಡತ ಸಂಖ್ಯೆ :ಕಂಇ 88 ಎಲ್‌ಸಿಎ 2008.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯಲ್ಲಿ 3 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:5.8.2008 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಸೃಜಿಸಲಾಗಿದೆ ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಕಡತದಲ್ಲಿ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ವರ್ಗಾವಣೆಗೊಂಡಿದ್ದ 12,000 ಎಲ್.ಎ.ಸಿ. ಪ್ರಕರಣಗಳ ಪೈಕಿ ಬಾಕಿ ಇರುವ ಪ್ರರಕಣಗಳನ್ನು ವಿಲೇವಾರಿ ಮಾಡಲು ಹಾಗೂ ಪ್ರತಿ ದಿನ ಬರುವ ಹೊಸ ಪ್ರಕರಣಗಳನ್ನು ನಿರ್ವಹಿಸಲು ಕಾನೂನು ಅಧಿಕಾರಿಗಳ ಹುದ್ದೆಗಳು ಸಾಕಾಗುವುದೆಂದು, ಆದ್ದರಿಂದ ಮೇಲೆ ಕ್ರಮ ಸಂಖ್ಯೆ(1)ರಲ್ಲಿನ ಆದೇಶದಲ್ಲಿ ಸೃಜಿಸಲಾದ 3 ಕಾನೂನು ಅಧಿಕಾರಿಗಳ ಹುದ್ದೆಗಳಲ್ಲಿ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ:5.8.2009 ರಿಂದ 31.3.2010 ರವರೆಗೆ ಮುಂದುವರಿಸುವಂತೆ ಕಂದಾಯ ಇಲಾಖೆಯು ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 594 ಸಅಸೇ 2009, ಬೆಂಗಳೂರು, ದಿನಾಂಕ:3ನೇ ಸೆಪ್ಟೆಂಬರ್, 2009**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ:5.8.2008 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಸೃಜಿಸಲಾದ 3 ಹೆಚ್ಚುವರಿ ಕಾನೂನು ಅಧಿಕಾರಿಗಳ ಹುದ್ದೆಗಳಲ್ಲಿ 2 ಹುದ್ದೆಗಳನ್ನು ದಿನಾಂಕ:5.8.2009ರಿಂದ ಜಾರಿಗೆ ಬರುವಂತೆ ದಿನಾಂಕ:31.3.2010 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2132

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)